Keshavan

# ದೇವರು ಮೈಮೇಲೆ ಬರುವದೆ?

ಡಾ। ಸಿ. ಆರ್. ಚಂದ್ರಶೇಖರ್

## ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು

ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು–560 012

ವಿಜ್ಞಾನದ ಪ್ರಚಾರಕ್ಕೆಂದೇ ಸ್ಥಾಪಿತವಾದ ರಾಜ್ಯ ಮಟ್ಟದ ಸ್ವಾಯತ್ತ ಸಂಸ್ಥೆ

### ಧ್ಯೇಯೋದ್ದೇಶಗಳು

ರಾಜ್ಯದ ಜನತೆಯಲ್ಲಿ ವಿಜ್ಞಾನವನ್ನು ಪ್ರಚಾರ ಮಾಡುವುದು, ವೈಜ್ಞಾನಿಕ ಮನೋಧರ್ಮವನ್ನು ಬೆಳೆಸುವುದು.

ವಿಚಾರಗೋಷ್ಠಿ, ಉಪನ್ಯಾಸ, ತರಬೇತಿ ಶಿಬಿರ, ಸಾರ್ವಜನಿಕ ಚರ್ಚೆ, ಶೈಕ್ಷಣಿಕ ಪ್ರವಾಸ, ವಸ್ತುಪ್ರದರ್ಶನ ಮುಂತಾದವುಗಳನ್ನು ಏರ್ಪಡಿಸುವುದು, ಕನ್ನಡದಲ್ಲಿ ವಿಜ್ಞಾನದ ಪುಸ್ತಕಗಳನ್ನೂ ನಿಯತಕಾಲಿಕೆಗಳನ್ನೂ ಪ್ರಕಟಿಸುವುದು;

ವಿಜ್ಞಾನಕ್ಕೆ ಸಂಬಂಧಿಸಿದ ಸಂಘ – ಸಂಸ್ಥೆಗಳನ್ನು ಗುರುತಿಸಿ ಅವುಗಳಿಗೆ ಅವಶ್ಯಕವಾದ ಪ್ರೋತ್ಸಾಹ ಮತ್ತು ನೆರವು ನೀಡುವುದು;

ವಿಜ್ಞಾನವನ್ನು ಜನಪ್ರಿಯಗೊಳಿಸಲು ಆಸಕ್ತಿ ಇರುವವರನ್ನೆಲ್ಲ ಸಂಘಟಿಸುವುದು.

**ಸದಸ್ಯತ್ವ ಶುಲ್ಕ :**

ಸಾಮಾನ್ಯ ಸದಸ್ಯರು : ವರ್ಷಕ್ಕೆ ರೂ. 10–00

ಸಹ ಸದಸ್ಯರು : ಹದಿನೆಂಟು ವರ್ಷಕ್ಕಿಂತ ಕೆಳಗಿರುವ ವಿದ್ಯಾರ್ಥಿಗಳು; ರೂ. 5–00

ಆಜೀವ ಸದಸ್ಯರು : ರೂ. 200–00

ದಾನಿಗಳು : ರೂ. 500–00

ಸಂಘ ಸಂಸ್ಥೆಗಳು : ವರ್ಷಕ್ಕೆ ರೂ. 100–00

ದಾನಿ ಸಂಘ ಸಂಸ್ಥೆಗಳು : ರೂ. 1000–00

# ದೇವರು, ದೆವ್ವ ಮೈಮೇಲೆ ಬರುವವೆ ?



ಡಾ. ಸಿ. ಆರ್. ಚಂದ್ರಶೇಖರ್




1983

*Devaru, Devva Maimele Baruvave ?* a popular account of the phenomenon of possession by Dr. C. R. Chandrashekhar published by Karnataka Rajya Vijnana Parishat, Indian Institute of Science Campus, Bangalore-12, Demy 1/12, 52 pages; Price : Rs-1-20



ಮೊದಲ ಆವೃತ್ತಿ, 1983



ಚಿತ್ರಗಳು : ಡಾ. ಎಂ. ಎಸ್. ಕೇಶವನ್

ರಕ್ಷಾಪುಟ : ಕೆ. ಎಲ್. ವೆಂಕಟೇಶ್



ಬೆಲೆ ರೂ. 1–20



ಪ್ರಕಾಶನ : ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಆವರಣ, ಬೆಂಗಳೂರು 560 012

ಮುದ್ರಣ : ಹರ್ಷ ಪ್ರಿಂಟರ್ಸ್, ಮೈಸೂರು 570 004

# ಅರಿಕೆ

ನಮ್ಮ ರಾಜ್ಯದ ಜನರಲ್ಲಿ ವಿಜ್ಞಾನವನ್ನು ಪ್ರಚಾರ ಮಾಡಿ ವೈಜ್ಞಾನಿಕ ಮನೋಭಾವದ ಬೆಳವಣಿಗೆಗೆ ಉತ್ತೇಜನ ನೀಡುವುದು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮುಖ್ಯ ಧ್ಯೇಯ. ರಾಜ್ಯದ ವಿವಿಧ ಸ್ಥಳಗಳಲ್ಲಿ ಸ್ವಯಂಪ್ರೇರಣೆಯಿಂದ ರೂಪುಗೊಂಡಿರುವ ಪರಿಷತ್ತಿನ ಘಟಕಗಳು ಸ್ಥಳೀಯವಾಗಿ ಈ ಕೆಲಸದಲ್ಲಿ ನಿರತವಾಗಿವೆ. ಉಪನ್ಯಾಸಗಳು, ವಿಚಾರ ಸಂಕಿರಣಗಳು, ವೈಜ್ಞಾನಿಕ ಪ್ರದರ್ಶನಗಳು ಮುಂತಾದವನ್ನು ಏರ್ಪಡಿಸುವ ಮೂಲಕವೂ ದಿನನಿತ್ಯದ ಸಮಸ್ಯೆಗಳಿಗೆ ವೈಜ್ಞಾನಿಕ ಪರಿಹಾರಗಳನ್ನು ಹುಡುಕುವಲ್ಲಿ ಜನತೆಗೆ ನೆರವು ನೀಡುವ ಮೂಲಕವೂ ಪರಿಷತ್ತಿನ ಧ್ಯೇಯಗಳನ್ನು ಸಫಲಗೊಳಿಸುವ ಪ್ರಯತ್ನ ನಡೆದಿದೆ. ಪರಿಷತ್ತು ಪ್ರಕಟಿಸುವ ನಿಯತಕಾಲಿಕಗಳೂ ಕಿರುಹೊತ್ತಗೆಗಳೂ ಆ ಪ್ರಯತ್ನಕ್ಕೆ ಬೆಂಬಲ ನೀಡಬೇಕಾಗಿದೆ. ಈಗಾಗಲೇ ನಾಲ್ಕು ವರ್ಷ ತುಂಬಿ ಐದನೆಯ ವರ್ಷದಲ್ಲಿ ಕಾಲಿಟ್ಟಿರುವ ಬಾಲವಿಜ್ಞಾನ ಮಾಸಪತ್ರಿಕೆ ಈ ದಿಶೆಯಲ್ಲಿ ಸಾಕಷ್ಟು ಯಶಸ್ಸು ಗಳಿಸಿದೆ; ಪರಿಣಾಮವಾಗಿ ಜನಪ್ರಿಯವಾಗಿದೆ. ವಿಜ್ಞಾನ ವಿಷಯಗಳನ್ನು ಕುರಿತ ಕಿರುಹೊತ್ತಗೆಗಳನ್ನು ಪ್ರಕಟಿಸುವ ಕಾರ್ಯವನ್ನು ಪರಿಷತ್ತು ಕಳೆದ ವರ್ಷ ಕೈಗೆತ್ತಿಕೊಂಡಿತು.

ದೆವ್ವ ಹಿಡಿಯುವುದು ಮತ್ತು ಮೈಮೇಲೆ ದೇವರು ಬರುವುದು— ಇವು ಬಹುಮಟ್ಟಿಗೆ ಹಳ್ಳಿಗಾಡಿನ ಅವಿದ್ಯಾವಂತ ಜನರಲ್ಲಿ ಕಾಣಬರುವ ವಿದ್ಯಮಾನಗಳು. ಈ ಎರಡರಲ್ಲಿಯೂ ಇರುವ ಸಾಮಾನ್ಯ ಲಕ್ಷಣವೆಂದರೆ, ಸಂಬಂಧಪಟ್ಟ ಸ್ತ್ರೀ ಅಥವಾ ಪುರುಷನ ಸಾಮಾನ್ಯ ವ್ಯಕ್ತಿತ್ವ ತಾತ್ಕಾಲಿಕವಾಗಿ ಅಡಗಿ ಹೋಗಿ, ಅದರ ಬದಲು ನಿಜವಾದ ಅಥವಾ ಕಾಲ್ಪನಿಕ ಅನ್ಯ ವ್ಯಕ್ತಿಯ ವ್ಯಕ್ತಿತ್ವ ಕಾಣಿಸಿಕೊಳ್ಳುವುದು. ಇದೊಂದು ಮಾನಸಿಕ ಸ್ಥಿತಿ. ವಿದ್ಯಾವಂತ ವ್ಯಕ್ತಿಗಳು ಈ ಸ್ಥಿತಿಗೊಳಗಾಗುವುದು ಅತ್ಯಂತ ವಿರಳ; ಇಲ್ಲವೇ ಇಲ್ಲವೆನ್ನಬಹುದು. ಬಹುಮಟ್ಟಿಗೆ ಹಾನಿಕರ ಪರಿಣಾಮಗಳಿಗೆ ದಾರಿ ಮಾಡಿಕೊಡುವ ಈ ವಿದ್ಯಮಾನವನ್ನು ತೊಡೆದುಹಾಕಲು

ಇರುವ ಮಾರ್ಗ ಒಂದೇ: ಶಿಕ್ಷಣ, ಈ ಪಿದ್ಯಮಾನದ ವೈಜ್ಞಾನಿಕ ವಿಶ್ಲೇಷಣೆಯಿಂದ ದೊರಕುವ ತಿಳಿವಳಿಕೆ.

ಬೆಂಗಳೂರಿನಲ್ಲಿರುವ ಅಖಿಲ ಭಾರತ ಮಾನಸಿಕ ಆರೋಗ್ಯ ಸಂಸ್ಥೆಯ ಡಾ. ಸಿ. ಆರ್. ಚಂದ್ರಶೇಖರ್ ಅವರು ಎಲ್ಲರಿಗೂ ಸುಲಭ ವಾಗಿ ಅರ್ಥವಾಗುವ ಸರಳ ಭಾಷೆಯಲ್ಲಿ, ಸುಂದರವಾದ ಶೈಲಿಯಲ್ಲಿ, ಈ ವಿದ್ಯಮಾನದ ಮೇಲೆ ವಿಜ್ಞಾನದ ಬೆಳಕನ್ನು ಚೆಲ್ಲಿದ್ದಾರೆ. ನಮಗಾಗಿ ಈ ಪುಸ್ತಕವನ್ನು ರಚಿಸಿಕೊಟ್ಟ ಡಾ. ಚಂದ್ರಶೇಖರ್ ಅವರಿಗೆ, ಇದಕ್ಕೆ ಆಕರ್ಷಕ ಚಿತ್ರಗಳನ್ನೊದಗಿಸಿದ ಅವರ ಸಹೋದ್ಯೋಗಿ, ಡಾ ಎಂ. ಎಸ್. ಕೇಶವನ್ ಅವರಿಗೆ ಮತ್ತು ಅತಿ ಕ್ಷಿಪ್ರವಾಗಿ, ಆದರೂ ಸುಂದರವಾಗಿ ಪುಸ್ತಕವನ್ನು ಮುದ್ರಿಸಿಕೊಟ್ಟ ಮೈಸೂರಿನ ಹರ್ಷ ಮುದ್ರಣಾಲಯ ದವರಿಗೆ ಪರಿಷತ್ತಿನ ಕೃತಜ್ಞತೆ ಸಲ್ಲುತ್ತದೆ.

ಡಾ. ಎಚ್. ನರಸಿಂಹಯ್ಯ

ಅಧ್ಯಕ್ಷ

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು

ಬೆಂಗಳೂರು

ಫೆಬ್ರುವರಿ 1983

ಹತ್ತಾರು ಕಣ್ಣುಗಳು ರೆಪ್ಪೆ ಹೊಡೆಯದೆ ದೃಷ್ಟಿಸಿ ನೋಡುತ್ತಿವೆ. ಯಾವ ಕ್ಷಣದಲ್ಲಾದರೂ ಪ್ರಾರಂಭವಾಗಲಿರುವ ವಿಶೇಷವನ್ನು ಕಾಣುವ ತವಕ ನೆರೆದವರನ್ನೆಲ್ಲಾ ತುಂಬಿದೆ. ಎಣ್ಣೆ ಹತ್ತಿ ಕವುಟು ಹಿಡಿದು ಕಪ್ಪಾದ ಸೊಡರಿನ ಮಬ್ಬು ಬೆಳಕಿನಲ್ಲಿ ಕತ್ತಿ ಹಿಡಿದು ಕೆಂಗಣ್ಣು ಬಿಡು ತ್ತಿರುವ ವೀರಭದ್ರ ಗಣದ ವಿಗ್ರಹ ನೋಡುವವರ ಮನಸ್ಸಿನಲ್ಲಿ ಭಕ್ತಿ ಗಿಂತಲೂ ಭಯಗೊಂದಲಗಳನ್ನು ಬಿತ್ತುತ್ತಿದೆ. ಅದರ ಮುಂದೆ ಕೆಂಪು ವಸ್ತ್ರವನ್ನು ಸೊಂಟಕ್ಕೆ ಹಾಗೂ ತಲೆಗೆ ಬಿಗಿದ ಪೂಜಾರಿ ಭರಮು ಯಾರಿಗೂ ಅರ್ಥವಾಗದ ಮಂತ್ರಗಳನ್ನು ಮಣಮಣಿಸುತ್ತಾ ಮುಳ್ಳಿನ ಹಾವುಗೆಯ ಮೇಲೆ ನಿಂತಿದ್ದಾನೆ. ಕೈಯಲ್ಲಿ ಹೊಳೆಯುವ ತ್ರಿಶೂಲ ಹಿಡಿದಿದ್ದಾನೆ. ಅವನ ಪಕ್ಕದಲ್ಲಿ ಕುಂಕುಮ, ವಿಭೂತಿಗಳ ರಾಶಿಯನ್ನು ತಟ್ಟೆಯಲ್ಲಿಟ್ಟುಕೊಂಡು, ನಡು ಬಗ್ಗಿಸಿ ನಿಂತ ಸಹಾಯಕನಿದ್ದಾನೆ. ಆಗೊಮ್ಮೆ ಈಗೊಮ್ಮೆ ಕೂಗುವ ಕಾಗೆಗಳ ಶಬ್ದವನ್ನು ಬಿಟ್ಟರೆ, ಉಸಿರುಗಟ್ಟುವ ಮೌನ ಆವರಿಸಿದೆ. ಕಣ್ಣು ಮುಚ್ಚಿ ಮಣಮಣಿಸು ತ್ತಿದ್ದ ಭರಮು ಕಣ್ಣು ತೆರೆದ. ಕಣ್ಣು ಗುಡ್ಡೆಗಳು ಗರಗರನೆ ತಿರುಗಿದುವು, ಬೆಂಕಿಯ ಚೆಂಡುಗಳಾದುವು. ಅವನ ಬಾಯಿಂದ ಹೊರಟ 'ವೀರಭದ್ರಾ' ಎಂಬ ಕೂಗು, ವಾತಾವರಣದಲ್ಲಿ ಹೆಪ್ಪು ಕಟ್ಟಿದ್ದ ಮೌನವನ್ನು ಸೀಳಿತು. ನೆರೆದವರ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. 'ಗಣ ಬಂದಿತು' ಎಂದು ಪಿಸುಗುಟ್ಟಿದರು, ಕೈಮುಗಿದು ನಡು ಬಗ್ಗಿಸಿ ನಿಂತರು. ಭರಮುನ ದೇಹ ಮೆಲ್ಲನೆ ನಡುಗಲಾರಂಭಿಸಿತು. ಲಯಬದ್ಧ ವಾಗಿ ತೂಗಲಾರಂಭಿಸಿತು. ಮತ್ತೊಮ್ಮೆ 'ವೀರಭದ್ರಾ' ಎಂದು ಕೂಗು ಹಾಕಿದ. ಗಂಟೆ ಜಾಗಟೆಗಳ ಗಡದ್ದು ಸದ್ದಿನಲ್ಲಿ ಅವನ ಸಹಾಯಕ ವಿಗ್ರಹಕ್ಕೆ ಕರ್ಪೂರದಾರತಿ ಮಾಡಿದ. ಭರಮು ಕೈ ಚಾಚಿ, ಕುಂಕುಮ ವನ್ನು ಹಿಡಿಯಲ್ಲಿ ಹಿಡಿದು ಹಣೆಗೆ ಬಳಿದುಕೊಂಡ. ವಿಭೂತಿಯನ್ನು ಅಂಗೈಯಲ್ಲಿ ಹಾಕಿಸಿಕೊಂಡು ಉಫ್ ಎಂದು ಉರುಬಿದ. ''ಭಕ್ತಾ

ನನ್ನಿಂದೇನಾಗಬೇಕು?'' ಎಂದ. ಸಹಾಯಕನ ಕಣ್ಸನ್ನೆಯಂತೆ, ಸಹಾಯ ಬೇಡಲು, ನಿಮಿತ್ತ ಕೇಳಲು, ಕಾಣಿಕೆ ಒಪ್ಪಿಸಲು, ಬಂದಿದ್ದವರಲ್ಲಿ ಒಬ್ಬ ಮುಂದೆ ಬಂದು ಅಡ್ಡ ಬಿದ್ದ. ಎದ್ದು ಕೈ ಜೋಡಿಸಿ, ''ಅಪ್ಪಾ ನನ್ನನ್ನು ಕಾಪಾಡಬೇಕು. ನಿನ್ನೆ ಕಾಡಿಗೆ ಮೇಯಲು ಹೋದ ಹಸು ಮನೆಗೆ ಬಂದಿಲ್ಲ. ಅದು ವಾಪಸ್ ಬರುವಂತೆ ಮಾಡಬೇಕು'' ಎಂದ. "ಭಕ್ತಾ, ಹೆದರಬೇಡ ಹೋಗು. ನಾಲ್ಕು ಜನರನ್ನು ಕರೆದುಕೊಂಡು ಕಾಡಿನಲ್ಲಿ ಹುಡುಕು. ಈ ವಾರದೊಳಗಾಗಿ ನಿನ್ನ ಹಸು ನಿನಗೆ ಸಿಗುವುದು'' ಎಂದು ಗಣ ನುಡಿಯಿತು. ರೈತನ ಮುಖ ಅರಳಿ ಹೂವಾಯಿತು.



"ಅಪ್ಪಾ, ನಿನ್ನ ಕರುಣೆ ದೊಡ್ಡದು" ಎಂದು ಬಡಬಡಿಸಿ, ಮತ್ತೊಮ್ಮೆ ಅಡ್ಡ ಬಿದ್ದು ಕಾಣಿಕೆ ಒಪ್ಪಿಸಿದ. ಮುಂದಿನ ಸರದಿ ನಡು ವಯಸ್ಸಿನ ಹೆಂಗಸಿನದು. ಕಣ್ಣೀರು ಸುರಿಸುತ್ತಾ ಹೋ ಎಂದು ಅಳುತ್ತಾ, "ನನ್ನ ಮಗಳು ...." ಎಂದು ಮುಂದಕ್ಕೆ ಮಾತನಾಡಲಾಗದೇ ಬಿಕ್ಕಿದಳು. "ಅಳ ಬೇಡ, ಭಕ್ತೇ, ತಗೋ, ಈ ಪ್ರಸಾದವನ್ನು ನಿನ್ನ ಮಗಳಿಗೆ ಕೊಡು. ಅವಳ ಖಾಯಿಲೆ ಗುಣವಾಗುವುದು" ಎಂದಿತು. ನೆರೆದವರು, "ಆಹಾ! ದೈವಕ್ಕೆ ನಮಗೆ ಏನು ಕಷ್ಟವೆಂದು ಹೇಳಬೇಕೇ? ಅದಕ್ಕೆ ಎಲ್ಲವೂ ಗೊತ್ತು" ಎಂದು ಲೊಚಗುಟ್ಟಿದರು. ಅನಂತರ ಇನ್ನೊಬ್ಬ ರೈತ ಮುಂದೆ ಬಂದು, ಅಡಕೆ ಪಟ್ಟಿಯಲ್ಲಿ ಕಟ್ಟಿಕೊಂಡು ಬಂದಿದ್ದ ಮಣ್ಣನ್ನು ಪೂಜಾರಿಯ ಮುಂದಿಟ್ಟು, "ಅಪ್ಪಾ! ಈ ಮಣ್ಣಿರೋ ಭೂಮಿಯನ್ನು ಕೊಂಡು ಕೊಳ್ಳಬೇಕೆಂದಿದ್ದೇನೆ. ನನಗೆ ಒಳ್ಳೇದಾದೀತಾ? "ಎಂದ. ಅಡಕೆ ಪಟ್ಟೆಯೊಳಕ್ಕೆ ವಿಭೂತಿ, ಹೂವನ್ನು ಹಾಕಿ, "ಹೂಂ ತೆಗೆದುಕೋ, ಒಳ್ಳೇದಾಗುವುದು" ಎಂದಿತು. ರೈತ ಸಂಭ್ರಮದಿಂದ ಅಡ್ಡ ಬಿದ್ದ. ಈ ರೀತಿ ಪೂಜಾರಿ ಭರಮನ ಮೇಲೆ ಬರುತ್ತದೆ ಎನ್ನಲಾದ ದೈವದ ಒಡ್ಡೋಲಗ ಸಾಗಿತ್ತು, ಬೆಳಗಿನಿಂದ ಸಂಜೆಯವರೆಗೆ, ತಮ್ಮ ಒಂದಲ್ಲ ಒಂದು ಸಮಸ್ಯೆಯನ್ನು ಅದರ ಮುಂದೆ ತೋಡಿಕೊಂಡು ನೆರವು ಬೇಡಲು ಹಳ್ಳಿಗಳ ಜನ ಬರುತ್ತಲೇ ಇದ್ದರು.

* * * *

ಕೇರಿಯಲ್ಲೆಲ್ಲಾ ಗುಲ್ಲು. ಹನುಮಕ್ಕನ ಮೈಮೇಲೆ ದೆವ್ವ ಬಂದಿದೆ ಯಂತೆ. ಹೀಗೆ ಬಂದ ದೆವ್ವ ಬೇರೆ ಯಾವುದೂ ಅಲ್ಲವಂತೆ. ಎರಡು ವರ್ಷಗಳ ಹಿಂದೆ ಸತ್ತ ಅವಳ ಸವತಿಯೇ ಬಂದಿದ್ದಾಳಂತೆ. ಜನ ಹನು ಮಕ್ಕನ ಮನೆಯ ಮುಂದೆ ಘೇರಾಯಿಸಿದರು. ಮನೆಯ ಅಂಗಳದಲ್ಲಿ ತಲೆ ಕೆದರಿಕೊಂಡು ಸೊಂಟವನ್ನೂ ಕತ್ತನ್ನೂ ಆಡಿಸುತ್ತಾ ಹೂಂಕರಿಸುತ್ತಿದ್ದ ಹನುಮಕ್ಕ ಅವರ ಆಕರ್ಷಣೆಯಾದಳು. ಹನುಮಕ್ಕನ ಅತ್ತೆ, ಮುದುಕಿ ಮಲ್ಲವ್ವ, ಪಾಪ, ಒಂದು ಮೂಲೆಯಲ್ಲಿ ನಿಂತು ಪಿಳಿಪಿಳಿ ನೋಡುತ್ತಿ ದ್ದಾಳೆ. ಹನುಮಕ್ಕ ಒಮ್ಮೆಲೇ ಜೋರು ಧ್ವನಿಯಲ್ಲಿ ಕೂಗತೊಡಗಿದಳು.

"ಎಲ್ಲಿ ಆ ಬೇವಾರ್ಸಿ ? ಅವನನ್ನ ಕರೆಯಿರಿ" ಎಂದಳು. ಅವಳ ಧ್ವನಿ ಪೂರ್ಣ ಬದಲಾಗಿತ್ತು. ನೆರೆದವರಲ್ಲಿ ಒಬ್ಬ ಧೈರ್ಯಮಾಡಿ, "ಯಾರನ್ನು ಕರೀಬೇಕು ಹನುಮಕ್ಕ?" ಎಂದ. "ಲೋ, ನಾನು ಹನುಮಕ್ಕ ಅಲ್ಲವೋ, ನಾನು ಪಾರೋತಿ. ನನ್ನ ಗಂಡನ್ನ.... ಆ ಬೇವಾರ್ಸೀನ್ನ ಕರಿಯೋ" ಎಂದಳು. ಅಷ್ಟರಲ್ಲಿ ತನ್ನ ಎರಡನೇ ಹೆಂಡತಿಯ ಮೇಲೆ ಮೊದಲ ಹೆಂಡತಿಯ ದೆವ್ವ ಬಂದಿದೆ ಎಂದು ತಿಳಿದ ಗಂಡ, ಮುನಿಯ, ನೇರವಾಗಿ ಸಾರಾಯಿ ಅಂಗಡಿಯಿಂದ ಬಂದ. ಕುಡಿದು ಅಮಲಿನಲ್ಲಿದ್ದ ಆತ, "ಪಾರೋತಿ ದೆವ್ವವಾಗಿ ಬಂದವಳಾ ? ಹಳೇ ಎಕ್ಕಡ ತಗೊಂಡು ಹೊಡೀತೀನಿ" ಎನ್ನುತ್ತಿದ್ದ. ಅವನನ್ನು ಕಾಣುತ್ತಿದ್ದಂತೆ ಹನುಮಕ್ಕ ಅವನ ಮೇಲೆ ಏರಿ ಹೋದಳು. ಅಸಹ್ಯ ಭಾಷೆಯಲ್ಲಿ ಅವನನ್ನು ಬೈಯುತ್ತಾ, ಮುಖ ಮೂತಿ ನೋಡದೆ ಬಾರಿಸಿದಳು. ಉಳಿದವರು ಅವಳನ್ನು ಹಿಡಿದು ಕಟ್ಟಿಹಾಕದಿದ್ದರೆ, ಅವಳ ಗಂಡನ ಗತಿ ಮುಗಿದು ಹೋಗುತ್ತಿತ್ತು. "ಬೇವಾರ್ಸಿ ನನ್ಮಗನೇ ! ಹೀಗೇ ಕುಡ್ದು ಕುಡ್ದು, ಹೊಲ ಗದ್ದೆ ಮಾರಿ, ನನ್ನ ಮಕ್ಕಳ ಕೈಗೆ ಚಿಪ್ಪು ಕೊಟ್ಟೆ. ನನ್ನ ಹೊಡ್ದೂ ಬಡ್ದೂ ಸಾಯಿಸಿ ಬಿಟ್ಟೆ. ನಾನು ಸತ್ತ ಮೇಲೂ ನಿನಗೆ ಬುದ್ಧಿ ಬರಲಿಲ್ಲ. ನಿನ್ನ ಚಟ್ಟ ನಾನೇ ಕಟ್ಟುತೀನಿ" ಎಂದು ಕೂಗಾಡುತ್ತಿದ್ದಳು. ಅರ್ಧ ಗಂಟೆಯ ನಂತರ ಅಲ್ಲೇ ಮುದುಡಿಕೊಂಡಳು. ಸ್ವಲ್ಪ ಹೊತ್ತಿನ ನಂತರ ಕಣ್ಣು ಬಿಟ್ಟ ಆಕೆ, "ನನಗೇನಾಯಿತು ? ಹಿಂಗ್ಯಾಕೆ ನನ್ನನ್ನು ಕಟ್ಟಿ ಹಾಕಿದ್ದೀರಿ?" ಎಂದಾಗ, ಈಗ ಮಾತಾಡುತ್ತಿರುವವಳು ಹನುಮಕ್ಕ, ಪಾರೋತಿಯ ದೆವ್ವವಲ್ಲ ಎಂದು ಗೊತ್ತಾಯಿತು.

* * * *

ವರ್ಷಕ್ಕೊಮ್ಮೆ ನಡೆಯುವ ಜಾತ್ರೆ. ಮಹಿಮೆಯ ದೇವರು ಎಂದು ಸುತ್ತಮುತ್ತ ಹತ್ತಾರು ಹಳ್ಳಿಗಳಲ್ಲಿ ಹೆಸರು ಮಾಡಿದ ದೇವರ ಜಾತ್ರೆ ಎಂದ ಮೇಲೆ ಭಕ್ತಾದಿಗಳ ಸಂಖ್ಯೆಗೆ ಮಿತಿಯುಂಟೆ? ಸಾವಿರಾರು ಜನ ನೆರೆಯುತ್ತಾರೆ. ಭಕ್ತಾದಿಗಳ ಇಷ್ಟಾರ್ಥಗಳನ್ನು ಪೂರೈಸುವ ಈ ದೇವರು ಜಾತ್ರೆಯ ದಿನ ಪೂಜಾರಿಯ ಮೈಮೇಲೆ ಮಾತ್ರವಲ್ಲದೇ

ಭಕ್ತಾದಿಗಳ ಮೈಮೇಲೂ ಬಂದು ಎಲ್ಲರನ್ನೂ ಆಶೀರ್ವದಿಸುವುದಂತೆ. ಭೂತ ಭವಿಷ್ಯತ್ತನ್ನೂ ಹೇಳುವುದಂತೆ. ಆ ಸಮಯದಲ್ಲಿ ಯಾರನ್ನಾದರೂ ಯಾವುದೇ ದೆವ್ವ, ಪಿಶಾಚಿ ಕಾಡುತ್ತಿದ್ದರೆ, ಅದು ಬಹಿರಂಗವಾಗಿ ಕಾಣಿಸಿಕೊಳ್ಳಲೇ ಬೇಕು. ದೇವರೇ ಸ್ವತಃ ಬಂದಾಗ, ಅದರ ಮುಂದೆ ಕ್ಷುದ್ರ ಭೂತ ಪ್ರೇತಗಳ ಆಟ ನಡೆಯುವುದೇ? ದುರ್ಬಲವಾದ ಭೂತ ಪ್ರೇತಗಳು ತಕ್ಷಣ ತಮ್ಮ ಕಾಲಿಗೆ ಬುದ್ಧಿ ಹೇಳಿ ಓಡಿಹೋಗುತ್ತವಂತೆ. ಮತ್ತೆ ಬಂದು ವ್ಯಕ್ತಿಯನ್ನು ಕಾಡುವುದಿಲ್ಲವಂತೆ. ಆದರೆ ಕೆಲವು ಘಾಟಿ



ಕೊಬ್ಬಿದ ದುಷ್ಟ ದೆವ್ವಗಳು ಹೆದರದೆ 'ನಾವು ಹೋಗುವುದಿಲ್ಲ' ಎಂದಾಗ ದೇವರು ಅವುಗಳನ್ನು ತರಾಟೆಗೆ ತೆಗೆದುಕೊಂಡು, ಅವುಗಳ ಕೊಬ್ಬನ್ನು ಇಳಿಸುವುದಂತೆ. ಕೆಲವು ಸಾರಿ ದೇವರಿಗೂ ಭೂತಕ್ಕೂ ವಾದ ವಿವಾದ, ಹೋರಾಟ ಜರುಗುವುದೂ ಉಂಟು. ಕೊನೆಯಲ್ಲಿ ಜಯ ದೇವರಿಗಲ್ಲದೆ ದೆವ್ವಕ್ಕೆ ಉಂಟೆ? ಜಾತ್ರೆಯ ದಿನ ಸೂರ್ಯ ನೆತ್ತಿಯ ಮೇಲೆ ಬಂದಾಗ ಈ ವಿಶೇಷ ಜರುಗುತ್ತದೆ. ಉತ್ಸವ ಮೂರ್ತಿಯ ಮುಂದೆ ಮುಖ್ಯ ಪೂಜಾರಿ ಕುಳಿತು, ಪೂಜೆ ಪ್ರಾರಂಭಿಸುತ್ತಾನೆ. ಡೋಲು, ಢಕ್ಕೆ, ತಮಟೆ, ಜಾಗಟೆಗಳ ಲಯಬದ್ಧವಾದ, ಕಿವಿಗಡಚಿಕ್ಕುವ ಶಬ್ದದ ಹಿನ್ನೆಲೆಯಲ್ಲಿ ಭಕ್ತಾದಿಗಳೆಲ್ಲಾ ಕೈ ಮುಗಿದು ನಿಂತಿರುತ್ತಾರೆ. ಲಯ ಬದ್ಧ ನಾದಕ್ಕೆ ಪೂಜಾರಿ ಆವೇಶದಿಂದ ಕುಣಿಯಲಾರಂಭಿಸುತ್ತಿದ್ದಂತೆ, ಹಲವಾರು ಜನ, ಕಣ್ಣನ್ನು ಅರೆಮುಚ್ಚಿ ತೂಗಾಡಲಾರಂಭಿಸುತ್ತಾರೆ. ಕೆಲವು ಹೆಂಗಸರು ನಡುಗುತ್ತಾ ಕಿರುಚಲಾರಂಭಿಸುತ್ತಾರೆ. ಅವರನ್ನು ಮೆಟ್ಟಿದ್ದ ದೆವ್ವ ಮೈಮೇಲೆ ಬಂದಿದೆ ಎಂದು ಇದರ ಅರ್ಥ. ಪೂಜಾರಿಯ ಸಹಾಯಕರು ಕೂಡಲೇ ದೇವರ ತೀರ್ಥವನ್ನು ಇವರ ಮುಖಕ್ಕೆ ಎರಚು ತ್ತಾರೆ. ಅಗ ಆ ಹೆಂಗಸರ ಕಿರುಚುವಿಕೆ, ಒದರಾಟ ನಿಂತು, ನೆಲಕ್ಕೆ ಉರುಳಿಕೊಳ್ಳುತ್ತಾರೆ, ಕ್ರಮೇಣ ತೆಪ್ಪಗಾಗುತ್ತಾರೆ. ಅವರನ್ನು ಹಿಡಿದಿದ್ದ ದೆವ್ವ ಓಡಿಹೋಯಿತೆಂದು ಆಗ ಗೊತ್ತಾಗುತ್ತದೆ. ತೀರ್ಥ ಹಾಕಿದ ಮೇಲೂ ಹೆಂಗಸಿನ ಚೀರಾಟ, ಒದರಾಟ ನಿಲ್ಲದಿದ್ದರೆ, ದೆವ್ವ ಘಾಟಿ, ಹಠಮಾರಿ ಎಂದು ತಿಳಿದು ಅವಳನ್ನು ಮುಖ್ಯ ಪೂಜಾರಿಯ ಹತ್ತಿರ ಕರೆದೊಯ್ಯುತ್ತಾರೆ. ಅಲ್ಲಿ ದೆವ್ವದ ಕೂಗಾಟವನ್ನು ಮೀರಿಸು ವಂತೆ ದೇವರು ಕೂಗು ಹಾಕುತ್ತದೆ, ಹೂಂಕರಿಸುತ್ತದೆ. "ಯಾರು ನೀನು ? ನನ್ನ ಮುಂದೆ ನಿಲ್ಲುವಷ್ಟು ಸೊಕ್ಕೇ?" ಎಂದು ಅಬ್ಬರಿಸು ತ್ತದೆ. ಕೆಲವು ಸಾರಿ ಇಷ್ಟಕ್ಕೇ ಹೆದರಿದ ದೆವ್ವ ಓಡಿಹೋಗುತ್ತದೆ. ಇಲ್ಲದಿದ್ದರೆ ದೈವ ಮತ್ತಷ್ಟು ಹೆದರಿಸಿ ಬೆದರಿಸಿದ ಮೇಲೆ, ದೆವ್ವ ತನ್ನ ಸೋಲನ್ನು ಒಪ್ಪಿಕೊಳುತ್ತದೆ.

* * * *

ಅಮಾವಾಸ್ಯೆಯ ರಾತ್ರಿ. ಮಂತ್ರವಾದಿ ಮಂಜಪ್ಪನ ಮನೆಯಲ್ಲಿ ಜನ ತುಂಬಿದ್ದಾರೆ. ಎಂತಹ ಘಾಟಿ ದೆವ್ವವೂ ಬಿಟ್ಟು ಹೋಗುವಂತೆ ಆಜ್ಞಾಪಿಸಬಲ್ಲ ಶಕ್ತಿವಂತನೆಂದು ಮಂಜಪ್ಪ ಆ ಪ್ರದೇಶದಲ್ಲೆಲ್ಲಾ ಪ್ರಸಿದ್ಧಿಯಾಗಿದ್ದಾನೆ. ಯಾರಿಗೂ ಜಗ್ಗದ ಮೋಹಿನಿಗಳು, ಮುಸ್ಲಿಂ ದೆವ್ವಗಳು ಅವನನ್ನು ಕಂಡರೆ ಹೆದರಿ ನಡುಗುತ್ತವಂತೆ. ಅವುಗಳ ಜುಟ್ಟು ಕಿತ್ತು, ಮತ್ತೆ ಅವು ಕಾಲಿಡದಂತೆ ಮಾಡುವನಂತೆ. ಅವನು ಮಂತ್ರ ಹಾಕಿ ದಿಗ್ಬಂಧನ ಮಾಡಿಬಿಟ್ಟರೆ, ಆ ಫಾಸಲೆಯಲ್ಲೇ ಯಾವೊಂದು ದೆವ್ವವೂ ಸುಳಿಯುವುದಿಲ್ಲ ಎನ್ನುತ್ತಾರೆ. ಅವನ ಸಹಾಯ ಯಾಚಿಸಿ ದೂರ ದೂರದ ಊರುಗಳಿಂದಲೂ ಜನ ಬರುತ್ತಾರೆ. ಪ್ರತಿ ಅಮಾವಾಸ್ಯೆ, ಪೌರ್ಣಿಮೆಯ ದಿನ, ಅವನ ಮನೆ ಬೀದಿಯ ಜನಗಳಿಂದ ತುಂಬಿಹೋಗುತ್ತದೆ. ಭದ್ರಕಾಳಿಯ ಉಪಾಸಕನಾದ ಮಂಜಪ್ಪನ ಮಾಂತ್ರಿಕ ಶಕ್ತಿಯ ಬಗ್ಗೆ ಅನೇಕ ಕಥೆಗಳನ್ನು ಜನ ಹೇಳುತ್ತಾರೆ. ಒಮ್ಮೆ ಅವನು ಶ್ಮಶಾನದಲ್ಲಿ ಪೂಜೆ ಮಾಡುತ್ತಿದ್ದಾಗ, ಅವನು ಹಿಂದೆ ಓಡಿಸಿದ್ದ ಒಂದು ಘಾಟಿ ದೆವ್ವ ಒಂದು ಗಡಿಗೆಯ ತುಂಬಾ ಹೇಲು ಉಚ್ಚೆಯನ್ನು ತಂದು ಅವನ ತಲೆಯ ಮೇಲೆ ಸುರಿಯಿತಂತೆ. ಆದರೆ ಅವು ಅವನ ಮೇಲೆ ಬೀಳುತ್ತಿದ್ದಂತೆ ಹೂವಿನ ಎಸಳುಗಳಾದುವಂತೆ. ಮಂಜಪ್ಪ ಅದರಲ್ಲಿ ಒಂದನ್ನು ತೆಗೆದು ಮಂತ್ರಿಸಿ, ಆ ದೆವ್ವದ ಮೇಲೆ ಎಸೆದಾಗ ಅದು ಕಿಟಾರನೆ ಕಿರುಚಿಕೊಂಡು ಸತ್ತೆನೋ ಕೆಟ್ಟೆನೋ ಎಂದು ಓಡಿಹೋಯಿತಂತೆ! ಇನ್ನೊಂದು ಸಾರಿ ಅವನು ಶ್ಮಶಾನದಲ್ಲಿದ್ದಾಗ, ಐದಾರು ದೆವ್ವಗಳು ಅವನ ಮೇಲೆ ದಾಳಿ ಮಾಡಿದುವಂತೆ. ಅವನ ಕೈ, ಕಾಲು, ಬಾಯಿಗಳು ಆಡದಂತೆ ಮಾಡಿಬಿಟ್ಟುವಂತೆ. ಇನ್ನು ಇವನ ಕಥೆ ಮುಗಿಯಿತೆಂದು ಕೇಕೆ ಹಾಕಿ ಕುಣಿದುವಂತೆ. ಕೈಕಾಲು, ಬಾಯಿ ಆಡದ ಮಂಜಪ್ಪ, ಆಗ ಒಂದು ಉಪಾಯ ಮಾಡಿದನಂತೆ. ಜೋರಾಗಿ ಉಚ್ಚೆ ಹೊಯ್ದು ತನ್ನ ಮಂತ್ರ ಶಕ್ತಿಯಿಂದ, ಆ ದೆವ್ವಗಳ ಮೇಲೆ ಉಚ್ಚೆ ಸಿಡಿಯುವಂತೆ ಮಾಡಿದಾಗ, ಅವು ಅಲ್ಲೇ ಸುಟ್ಟು ಬೂದಿಯಾದುವಂತೆ, ಇತ್ಯಾದಿ. ಅವನ ಭೂತ ಬಿಡಿಸುವ ವೈಖರಿಯೂ ಭಯಾನಕವೇ. ಕೆಂಪನೆಯ ನಾಲಗೆಯನ್ನು ಚಾಚಿ, ರುಂಡಮಾಲೆಯನ್ನು ಧರಿಸಿ, ಉರಿಗಣ್ಣು ಬಿಡುತ್ತಿರುವ ಭದ್ರಕಾಳಿಯ ಮುಂದೆ

ಆದರಷ್ಟೇ ಭಯಂಕರವಾಗಿ ಕಾಣುವ, ಆರಡಿ ಎತ್ತರದ, ತೊಳೆದ ಕೆಂಡದಂತಹ ಮೈಬಣ್ಣದ ಮಂಜಪ್ಪ ಕುಳಿತುಕೊಳ್ಳುತ್ತಾನೆ. ಬೇವಿನ ಕಟ್ಟು, ಹುಣಸೇ ಬರಲುಗಳೇ ಭೂತ ಬಿಡಿಸಲು ಆವನು ಉಪಯೋಗಿಸುವ ಆಯುಧ. ಒಮ್ಮೆ ಹೂಂಕರಿಸಿ, ಭೂತ ಮೆಟ್ಟಿಕೊಂಡಿರುವ ವ್ಯಕ್ತಿಯ ಮೈಮೇಲೆ ಬರೆ ಬರುವಂತೆ ಬಾರಿಸುತ್ತಾನೆ. "ಏಕೆ ಬಂದೆ ಬೊಗುಳು! ಬಿಟ್ಟು ಹೋಗುತ್ತೀಯೋ ಇಲ್ಲವೋ ?" ಎಂದು ಗರ್ಜಿಸುತ್ತಾನೆ. ಆವನ



ಅಬ್ಬರ ಕೇಳಿದವರು ತತ್ತರಿಸಿ ಹೋಗುತ್ತಾರೆ. ಬಿಟ್ಟು ಹೋಗುವುದರ ಗುರುತಾಗಿ ಮುಂದಲೆಯ ಕೂದಲನ್ನು ಕಿತ್ತುಕೊಡಲು ದೆವ್ವಕ್ಕೆ ಹೇಳುತ್ತಾನೆ. ದೇವಿಯ ಪ್ರೀತಿಗಾಗಿ ಕೋಳಿಯನ್ನು ಕೊಯ್ದು ರಕ್ತವನ್ನು ಚೆಲ್ಲುತ್ತಾನೆ. ಹಳೆಯ ಅಥವಾ ಘಾಟಿ ದೆವ್ವವಾದರೆ, ಕುರಿ, ಆಡನ್ನೂ ಬಲಿ ಕೊಡುತ್ತಾನೆ. ಆವನ ಮುಂದೆ ಮೊದಲು ಆಟಾಟೋಪ ಮಾಡಿ ಬಾಲ ನಿಮಿರಿಸುವ ದೆವ್ವಗಳು, ಹುಣಿಸೇ ಬರಲಿನಿಂದ ಏಟು

ಬೀಳುತ್ತಿದ್ದಂತೆಯೇ ಮುಲುಕಿ ನರಳುವುದನ್ನು, ಬಾಲ ಮುದುರಿಕೊಂಡು ಕುಂಯ್ ಗುಡುವುದನ್ನು ಜನ ನೋಡುತ್ತಾರೆ, ಕೇಳುತ್ತಾರೆ.

*    *    *    *

"ಕೇಳಿದ್ರಾ ಶ್ರೀನಿವಾಸಯ್ಯನವರೇ ? ನಮ್ಮ ಆಫೀಸಿನಲ್ಲಿ ಹೆಡ್ ಕ್ಲಾರ್ಕ್ ಆಗಿದ್ದಾರಲ್ಲಾ ಕೃಷ್ಣಮೂರ್ತಿರಾಯರು, ಅವರ ದೊಡ್ಡ ಮಗನ ಮೇಲೆ ಗುರುರಾಯರು ಮೈದುಂಬಿ ಬರುತ್ತಾರಂತೆ. ಆಗ ಆತನ ಮುಖದ ಮೇಲೆ ದೈವೀಕ ಕಳೆ ಇದ್ದು, ನೋಡುವುದಕ್ಕೆ ಎರಡು ಕಣ್ಣು ಗಳು ಸಾಲವಂತೆ. ಮೊನ್ನೆ ಗುರುವಾರ ಒಂದು ಪವಾಡವೇ ನಡೆದು ಹೋಯಿತಂತೆರೀ ! ಗುರುರಾಯರ ಪೂಜೆ ನಡೆಯುತ್ತಿತ್ತಂತೆ. ಪಕ್ಕದ ಮನೆಯ ಮಗುವಿಗೆ ಐದು ದಿವಸಗಳಿಂದ ಬಂದ ಜ್ವರ ಬಿಟ್ಟಿರಲಿಲ್ಲವಂತೆ. ಡಾಕ್ಟರುಗಳಿಗೆ ಇದು ಏನು ಜ್ವರವೋ ಗೊತ್ತಾಗಿರಲಿಲ್ಲವಂತೆ. ಟೈಫಾಯಿಡ್ಡೋ, ಮೆನಿನ್ಜೈಟಿಸ್ಸೋ ಹೇಳುವುದಕ್ಕೆ ಬರುವುದಿಲ್ಲ ಎಂದು ತಲೆಯಾಡಿಸಿಬಿಟ್ಟರಂತೆ. ಸಿರಪ್ಪು, ಇನ್‌ಜೆಕ್ಷನ್ನು ಯಾವುದರಿಂದಲೂ ಜ್ವರ ಕಡಿಮೆಯಾಗಲಿಲ್ಲವಂತೆ. ಮಗುವಿನ ತಾಯಿ ಒಂದೇ ಮನಸ್ಸಿನಿಂದ ಗುರುರಾಯರೇ ಕಾಪಾಡಬೇಕು ಅಂತ, ಜ್ವರದಿಂದ ಬೇಯುತ್ತಿದ್ದ ಮಗುವನ್ನು ಎತ್ತಿಕೊಂಡು ಹೋಗಿ ಕುಳಿತರಂತೆ. ಪೂಜೆ ನಡೆಯುತ್ತಿರಬೇಕಾದರೆ, ಕೃಷ್ಣಮೂರ್ತಿಯವರ ಮಗ ಇದ್ದಕ್ಕಿದ್ದಂತೆ ಪದ್ಮಾಸನ ಹಾಕಿ ಕುಳಿತನಂತೆ. ಅವನ ಮುಖ ಹೊಸ ಕಾಂತಿಯಿಂದ ಬೆಳಗತೊಡಗಿತಂತೆ. "ಎಲ್ಲಿ ತಾಯಿ, ಆ ಮಗುವನ್ನು ಇಲ್ಲಿ ಕೊಡಿ" ಎಂದು ಹೇಳಿ ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ಅದರ ಮೈಯನ್ನು ಸವರಿದನಂತೆ. ಪವಾಡದಂತೆ ಮಗು ಬೆವರಲಾರಂಭಿಸಿ, ಕಾದ ಹೆಂಚಿನಂತಿದ್ದ ಅದರ ಮೈ ತಂಪಾಗಿ, ಜ್ವರ ಇಳಿದುಹೋಯಿತಂತೆ. ಅನಂತರ ಕೃಷ್ಣಮೂರ್ತಿಯವರ ಮಗ ಪಕ್ಕಕ್ಕೆ ಉರುಳಿಕೊಂಡನಂತೆ. ಜ್ಞಾನ ಬಂದಾಗ, ನಡೆದದ್ದು ಒಂದೂ ಅವನಿಗೆ ಗೊತ್ತಿರಲಿಲ್ಲವಂತೆ. ಡಾಕ್ಟರೂ ಸೇರಿದಂತೆ ಎಲ್ಲರೂ ಇದು ಗುರುರಾಯರ ಕರುಣೆ, ಅವರೇ ಮೈದುಂಬಿ ಬಂದು ಮಗುವಿನ ಕಾಯಿಲೆಯನ್ನು ಗುಣಮಾಡಿದರೆಂದು ನಂಬಿದರಂತೆ."

"ಹೌದು, ನನಗೂ ಈ ಸುದ್ದಿ ಬಂತು ಕಣ್ರೀ. ಗುರುರಾಯರ ಮಹಿಮೆ ಅಪಾರ ಕಣ್ರೀ. ಕೃಷ್ಣಮೂರ್ತಿರಾಯರ ಮಗ ಪುಣ್ಯವಂತ ಬಿಡ್ರೀ. ಮೊದಲಿನಿಂದಲೂ ಅವನನ್ನು ನೋಡಿದ್ದೀನಿ. ಭಾಳಾ ಸಂಭಾವಿತ. ಗುರುಹಿರಿಯರು ಅಂದರೆ ಬಹಳ ಗೌರವ, ಪೂಜೆ ಪಾರಾಯಣದಲ್ಲಂತೂ ಭಾರೀ ಆಸಕ್ತಿ ಇರೋ ಹುಡುಗ. ಅವನ ಮೇಲೆ ರಾಯರು ಬಂದದ್ದು ಆಶ್ಚರ್ಯವಲ್ಲ. ಈ ಗುರುವಾರ ನಾವಿಬ್ಬರೂ ಪೂಜೆಗೆ ಅವರ ಮನೆಗೆ ಹೋಗೋಣ."

* * * *

ಹೀಗೆ ಕೆಲವರ ಮೈಮೇಲೆ ದೇವರು, ದೆವ್ವ ಅಥವಾ ದೇವಾಂಶ ಸಂಭೂತ ವ್ಯಕ್ತಿಗಳು ಬರುವುದನ್ನು ನಾವೆಲ್ಲ ಕೇಳಿದ್ದೇವೆ, ಓದಿದ್ದೇವೆ ಅಥವಾ ನೋಡಿಯೂ ಇದ್ದೇವೆ. ಇದೆಲ್ಲ ಸಾಧ್ಯವಿದೆ ಎಂದು ಬಹುಪಾಲು ಜನ ನಂಬುತ್ತಾರೆ. ತಾವು ಕೇಳಿದ, ನೋಡಿದ ಪ್ರಕರಣಗಳನ್ನು ರಸವತ್ತಾಗಿ ಬಣ್ಣಿಸುತ್ತಾರೆ. ಇದು ನಡೆದೇ ನಡೆಯುತ್ತದೆ, ಏಕೆ ನಡೆಯಬಾರದು ಎಂದು ವಾದಿಸುತ್ತಾರೆ. ಕೆಲವು ತೊಂದರೆ, ಕಾಯಿಲೆಗಳು ಬಂದಾಗ ಅದು ಈ ಪ್ರಕರಣಕ್ಕೆ ಸಂಬಂಧಿಸಿದ್ದು ಎಂದು ನಿರ್ಧರಿಸಿ, ಅದಕ್ಕೆ ತಕ್ಕ ಪರಿಹಾರವನ್ನು ಪಡೆಯಲು ದೇವಸ್ಥಾನಗಳಿಗೆ, ಮಂತ್ರವಾದಿಗಳ ಬಳಿಗೆ ಓಡುತ್ತಾರೆ.

ಈ ರೀತಿ ಮೈ ಮೇಲೆ ದೇವರು, ದೆವ್ವ ಬಂದಾಗ ವ್ಯಕ್ತಿ ಕೆಲವು ಸಾರಿ ಅತಿಮಾನುಷವಾದುದನ್ನು ಪ್ರದರ್ಶಿಸುತ್ತಾನೆ. ಅದೇ ದೈವ ಅಥವಾ ದೆವ್ವ ಬಂದುದಕ್ಕೆ ಸಾಕ್ಷಿ ಎನ್ನಲಾಗುತ್ತದೆ. ಉದಾಹರಣೆಗೆ, ದೇವರು ಬಂದಾಗ, ವ್ಯಕ್ತಿ ನಿಗಿ ನಿಗಿ ಕೆಂಡದ ಮೇಲೆ ನಡೆಯುತ್ತಾನೆ. ಕತ್ತಿಯಿಂದ ಹೊಡೆದುಕೊಳ್ಳುತ್ತಾನೆ. ಮುಳ್ಳಿನ ಹಾವುಗೆಯನ್ನು ಮೆಟ್ಟಿ ನಡೆಯುತ್ತಾನೆ. ಅಂಗೈ ಮೇಲೆ ಕರ್ಪೂರ ಹತ್ತಿಸಿಕೊಳ್ಳಬಲ್ಲ. ಹತ್ತಾಳಿನ ಶಕ್ತಿ ಬಂದು, ಬಂಡೆಯನ್ನು ನೂಕಬಲ್ಲ. ಹತ್ತು ಜನರ ಊಟವನ್ನು ಒಬ್ಬನೇ ತಿಂದು ಮುಗಿಸಬಲ್ಲ. ತನಗರಿಯದ ಭಾಷೆಯಲ್ಲಿ ನಿರರ್ಗಳವಾಗಿ ಮಾತಾಡಬಲ್ಲ. ತಾನು ಹಿಂದೆ ಎಂದೂ ಮಾಡಿ ಅನುಭವ ಇರದ ಕೆಲಸ ಮಾಡ

ಬಲ್ಲ. ಭೂತ ಭವಿಷ್ಯತ್ತನ್ನೂ ಹೇಳಬಲ್ಲ ಎಂದು ಹೇಳುತ್ತಾರೆ. ಹಾಗೆಯೇ ದೆವ್ವ ಬಂದಾಗ ವ್ಯಕ್ತಿ ಹತ್ತು ಜನ ಹಿಡಿದರೂ ತಡೆಯಲಾಗದಷ್ಟು ಗಲಾಟೆ ಮಾಡಬಹುದು. ವ್ಯಕ್ತಿಗೆ ಗೊತ್ತಿಲ್ಲದ ವಿಚಾರಗಳನ್ನು ಹೇಳ ಬಹುದು ಎನ್ನಲಾಗಿದೆ.

ಈ ಬಗೆಯಲ್ಲಿ ಜನರ ಮೈಮೇಲೆ ದೇವರು, ದೆವ್ವ ಬರುವುದು ಏನು ? ವೈಜ್ಞಾನಿಕ ದೃಷ್ಟಿಯಲ್ಲಿ ಈ ಪ್ರಕರಣಗಳ ಅರ್ಥವೇನು ? ದೇವರು ಅಥವಾ ದೆವ್ವ ಬಂದಾಗ ವ್ಯಕ್ತಿಗೆ ವಿಶೇಷ ಶಕ್ತಿ ಸಾಮರ್ಥ್ಯ ಗಳು ಬರುತ್ತವೆಯೇ ? ಹಾಗೆ ಬಂದರೆ ಅದು ಹೇಗೆ ಬರಲು ಸಾಧ್ಯ ? ಹೀಗೆ ದೇವರು, ದೆವ್ವ ಬರುವುದರಿಂದ ವ್ಯಕ್ತಿಗೆ, ಮನೆಯವರಿಗೆ ಹಾಗೂ ಸಮಾಜಕ್ಕೆ ಎಷ್ಟು ಅನುಕೂಲ, ಎಷ್ಟು ಅನನುಕೂಲ ? ಎಷ್ಟು ಲಾಭ, ಎಷ್ಟು ನಷ್ಟ ? ಯಾರಿಗೆ ಅನುಕೂಲ ಮತ್ತು ಲಾಭ ? ಯಾರಿಗೆ ಅನನು ಕೂಲ ಮತ್ತು ನಷ್ಟ ? ಇದರ ಮೇಲೆ ಹತೋಟಿ ಸಾಧ್ಯವೇ ? ಯಾರು ಇದಕ್ಕೆ ಹೆಚ್ಚು ಒಳಗಾಗುತ್ತಾರೆ ? ಇದು ಅಂಗೀಕಾರಾರ್ಹವೇ ಅಥವಾ ತಿರಸ್ಕಾರಾರ್ಹವೇ ? ಸದ್ಯಕ್ಕೆ ಲಭ್ಯವಿರುವ ವೈಜ್ಞಾನಿಕ ಮಾಹಿತಿ, ತಿಳಿವಳಿಕೆಗಳ ಬೆಳಕಿನಲ್ಲಿ ಇದನ್ನು ವಿವೇಚಿಸೋಣ.

### ಅನಾದಿ ಕಾಲದ ನಂಬಿಕೆ

ದೇವರು ಮನುಷ್ಯನ ಮೈಮೇಲೆ ಬರುತ್ತದೆ, ದೆವ್ವ ಅವನನ್ನು ಮೆಟ್ಟಿಕೊಳ್ಳುತ್ತದೆ ಎಂಬ ನಂಬಿಕೆ ಇಂದು ನಿನ್ನೆಯದಲ್ಲ ; ಮನುಷ್ಯನ ಇತಿಹಾಸದಷ್ಟೇ ಹಳೆಯದು. ಜಗತ್ತಿನ ಯಾವುದೇ ಜನಾಂಗದ ಇತಿಹಾಸ ಹಾಗೂ ಸಾಹಿತ್ಯವನ್ನು ಅವಲೋಕಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಅನಾದಿ ಕಾಲದಿಂದ ಇಂದಿನವರೆಗೆ, ಎಲ್ಲ ಸಮಾಜಗಳಲ್ಲಿಯೂ ಸರ್ವೇ ಸಾಮಾನ್ಯವಾಗಿ ಕಂಡುಬರುವ ಈ ನಂಬಿಕೆ ಮತ್ತು ಅಂಜಿಕೆಯ ವ್ಯಾಪಕತೆ ಎಂಥವರನ್ನೂ ಚಕಿತಗೊಳಿಸುತ್ತದೆ. ಪ್ರಾಚೀನ ಮಾನವ ತನಗೆ ಕಷ್ಟ ನಷ್ಟಗಳು ಬಂದಾಗ, ಕಾಯಿಲೆ ಕಸಾಲೆಗಳು ಕಾಡಿದಾಗ, ಅತಿವೃಷ್ಟಿ, ಅನಾವೃಷ್ಟಿ, ಪ್ರವಾಹ, ಭೂಕಂಪಗಳಂತಹ ಪ್ರಕೃತಿ ವಿಕೋಪಗಳು ಎದು ರಾದಾಗ, ಕಂಗಾಲಾಗುತ್ತಿದ್ದ, ಅಸಹಾಯಕನಾಗುತ್ತಿದ್ದ. ಇವೆಲ್ಲ ಏಕೆ

ಆಗುತ್ತವೆ ಎಂದು ತಿಳಿಯದೆ ಬೆಪ್ಪಾಗುತ್ತಿದ್ದ. ತನ್ನ ಸಾಮರ್ಥ್ಯಕ್ಕೆ ಮೀರಿದ, ತಾನು ಹತೋಟಿಯಲ್ಲಿಟ್ಟುಕೊಳ್ಳಲಾಗದ ಶಕ್ತಿಗಳು ಇರಬೇಕೆಂದು ಊಹಿಸಿದ. ಆ ಶಕ್ತಿಯನ್ನು ದೇವರು ಎಂದು ಕರೆದ. ದೇವರು ಸಂತುಷ್ಟನಾಗಿದ್ದರೆ ತನಗೆ ಒಳ್ಳೆಯದಾಗುತ್ತದೆ, ಆತನಿಗೆ ಕೋಪ ಬಂದರೆ ತನಗೆ ಕೆಟ್ಟದಾಗುತ್ತದೆ, ಸಂಕಟಗಳು ಬರುತ್ತವೆ ಎಂದು ತರ್ಕಿಸಿದ. ದೇವರನ್ನು ಸಂತುಷ್ಟಗೊಳಿಸಲು ತನ್ನಲ್ಲಿದ್ದ ಹಣ್ಣು ಹಂಪಲು, ಪ್ರಾಣಿಗಳನ್ನು ಅರ್ಪಿಸಿದ. ಪೂಜಾವಿಧಾನಗಳನ್ನು ಜಾರಿಗೆ ತಂದ. ತನ್ನ ಸಹಚರರು ಸತ್ತಾಗ ಅವರ ಪಾರ್ಥಿವ ಶರೀರವೇನೋ ಉಳಿಯುತ್ತದೆ. ಆದರೆ ಅವರ ಚೇತನ ? ಚಿಕ್ಕವಯಸ್ಸಿನಲ್ಲಿ ಸತ್ತವರ ಆತ್ಮ, ತಮ್ಮ ಹೆಂಡತಿ ಮಕ್ಕಳನ್ನು ಅತಿಯಾಗಿ ಪ್ರೀತಿಸುವವರ ಆತ್ಮ, ಆಸೆಯಿಂದ ಅಲ್ಲೇ ಅಲೆದಾಡಬಹುದೇ ? ತಮ್ಮ ಪ್ರೀತಿಪಾತ್ರರ ಸುತ್ತ ಸುಳಿದಾಡಬಹುದೇ ? ಅಗಲಿಕೆಯ ದುಃಖದಿಂದ ಭ್ರಾಂತಿಗೊಳಗಾದವರಿಗೆ ಸತ್ತ ವ್ಯಕ್ತಿಯ ಮಾತುಗಳು ಕೇಳಿಸುವುದು, ಆ ವ್ಯಕ್ತಿಗಳು ಕಣ್ಣಿಗೆ ಕಾಣಿಸಿಕೊಳ್ಳುವುದು ಈ ತರ್ಕಕ್ಕೆ ಪುಷ್ಟಿ ನೀಡಿದವು. ತಮ್ಮಲ್ಲೇ ಕೆಲವರು ಇದ್ದಕ್ಕಿದ್ದಂತೆ, ವಿಚಿತ್ರವಾಗಿ, ಹುಚ್ಚುಚ್ಚಾಗಿ ಆಡತೊಡಗಿದಾಗ, ಅವರು ಈ ರೀತಿ ಆಡಲು ಸತ್ತವರ ಪ್ರೇತಗಳ ಕಿಡಿಗೇಡಿತನವೇ ಕಾರಣವಿರಬಹುದೇ ಎಂಬೆಲ್ಲಾ ಆಲೋಚನೆಗಳು ಪ್ರಾಚೀನ ಮಾನವರನ್ನು ಕಾಡಿದ್ದಿರಬೇಕು. ಕೊನೆಗೆ ಬಹುತೇಕ ಜನಾಂಗಗಳಲ್ಲಿ ತಮ್ಮೆಲ್ಲ ಕಷ್ಟ ನಷ್ಟಗಳಿಗೆ, ಕಾಯಿಲೆ ಕಸಾಲೆಗಳಿಗೆ, ಕೋಪಗೊಂಡ ದೇವತೆಗಳು ಅಥವಾ ದುಷ್ಟ ದೆವ್ವ ಪಿಶಾಚಿಗಳು ಕಾರಣ ಎಂಬ ನಂಬಿಕೆ ಕಂಡುಬಂದಿತು.

ಅಂದು ಹುಟ್ಟಿದ ನಂಬಿಕೆ ಇಂದಿಗೂ ಪ್ರಪಂಚದ ಎಲ್ಲಾ ರಾಷ್ಟ್ರಗಳಲ್ಲಿ, ಅವು ತಾಂತ್ರಿಕವಾಗಿ ಮುಂದುವರೆದಿರಲಿ ಅಥವಾ ಹಿಂದುಳಿದಿರಲಿ, ಶ್ರೀಮಂತಿಕೆಯಿಂದಿರಲಿ ಅಥವಾ ಬಡತನದಲ್ಲಿರಲಿ, ಪ್ರಚಲಿತವಿರುವುದನ್ನು ಮನೋವಿಜ್ಞಾನಿಗಳೂ ಸಮಾಜ ಶಾಸ್ತ್ರಜ್ಞರೂ ಗುರುತಿಸಿದ್ದಾರೆ. ತಂತ್ರಜ್ಞಾನದಲ್ಲಿ ಹಿಂದುಳಿದಿರುವ ಏಷ್ಯಾ, ಆಫ್ರಿಕಾ ಖಂಡಗಳ ಜನಾಂಗಗಳಲ್ಲಿ ಭೂತಪ್ರೇತಗಳಲ್ಲಿ ನಂಬಿಕೆ, ಅಂಜಿಕೆ ವಿಪರೀತ. ಯಾವುದೇ ಬಗೆಯ ಮಾನಸಿಕ ಕಾಯಿಲೆ ಬಂದಾಗ ಅಥವಾ ವಿಚಿತ್ರವಾದ, ವಾಸಿಯಾಗದ

ಶಾರೀರಕ ಕಾಯಿಲೆ ಬಂದಾಗ, ಅನಿರೀಕ್ಷಿತವಾಗಿ ಕಷ್ಟ ನಷ್ಟಗಳು ಉಂಟಾದಾಗ, ಅದಕ್ಕೆ ಭೂತ ಪ್ರೇತಗಳೇ ಕಾರಣ ಎಂದು ಇಲ್ಲಿನ ಜನ ನಂಬುತ್ತಾರೆ. ಮಾನಸಿಕ ಕಾಯಿಲೆ ಬಂದಾಗ ವ್ಯಕ್ತಿ ಭ್ರಮೆ, ಭ್ರಾಂತಿಗೊಳಗಾಗಿ, ಅಸಹಜ ಹಾಗೂ ವಿಚಿತ್ರ ಸಂವೇದನೆಗಳಿಂದಾಗಿ, ವಿಚಿತ್ರವಾಗಿ ವರ್ತಿಸತೊಡಗಿದರೆ, ಆತನಿಗೆ ದೆವ್ವ ಹಿಡಿದಿದೆ ಎನ್ನುತ್ತಾರೆ.

ಈ ರೀತಿ ವ್ಯಕ್ತಿ ಕಾಯಿಲೆಗೆ ತುತ್ತಾದಾಗ, ಭೂತೋಚ್ಚಾಟನೆ ಮಾಡುವುದೇ ಮದ್ದು ಎಂದು ತರ್ಕಿಸುತ್ತಾರೆ. ಭೂತೋಚ್ಚಾಟನೆ ಮಾಡುವುದು ಹೇಗೆ ? ವಿವಿಧ ಜನಾಂಗಗಳಲ್ಲಿ ವಿವಿಧ ಬಗೆಯ ಪದ್ಧತಿ



ಗಳು ಜಾರಿಯಲ್ಲಿದ್ದುವು, ಇವೆ. ಭೂತ ಹಿಡಿದಿದೆ ಎನ್ನಲಾದ ವ್ಯಕ್ತಿಯನ್ನು ಹಿಂಸೆಗೆ ಒಳಪಡಿಸಿದರೆ, ಹೆದರಿಸಿದರೆ, ಆತನನ್ನು ಹಿಡಿದ ಭೂತಕ್ಕೂ ಹಿಂಸೆಯಾಗಿ, ಹೆದರಿ ಓಡುತ್ತದೆ ಎಂಬ ತರ್ಕದಿಂದ, ಆ ವ್ಯಕ್ತಿಗೆ ಕಾದ ಕಬ್ಬಿಣದ ಸಲಾಕೆಗಳಿಂದ ಬರೆ ಹಾಕುತ್ತಿದ್ದರು. ಕೊರೆಯುವ ನೀರಿನಲ್ಲಿ ಕಂಠಮಟ್ಟ ಮುಳುಗಿಸುತ್ತಿದ್ದರು. ಕಂಬಕ್ಕೆ ಕಟ್ಟಿ ಚಾಟಿಯಿಂದ ಹೊಡೆಯುತ್ತಿದ್ದರು. ಕತ್ತಲೆ ಕೋಣೆಯೊಳಕ್ಕೆ ತಳ್ಳಿ ಉಪವಾಸ ಕೆಡವು



ತ್ತಿದ್ದರು. ಕರುಳು ಹರಿದುಹೋಗುವಂತೆ ಭೇಧಿ ಮಾಡಿಸುತ್ತಿದ್ದರು, ವಾಂತಿ ಮಾಡಿಸುತ್ತಿದ್ದರು. ಇದು ಯಾವುದಕ್ಕೂ ಬಗ್ಗದಿದ್ದರೆ, ಆ ಭೂತ ಅಪಾಯಕಾರಿ ಎಂದು ಬಗೆದು ವ್ಯಕ್ತಿಯನ್ನು ಜೀವಂತ ಸುಟ್ಟು ಬಿಡುತ್ತಿದ್ದರು. ವ್ಯಕ್ತಿಯನ್ನು ಸುಟ್ಟರೆ, ಅವನೊಳಗಿದ್ದ ಭೂತವೂ ಸುಟ್ಟು ಹೋಗುತ್ತದೆ ಎಂದು ನಂಬುತ್ತಿದ್ದರು.

ಹೀಗೆ ಹಿಂಸೆ, ಹೆದರಿಕೆಗಳಿಗೆ ಭೂತದ ಕಾಟ ಕಡಿಮೆಯಾಗದಿದ್ದರೆ, ಅದನ್ನು ಒಲಿಸಿಕೊಳ್ಳುವುದು ಹೇಗೆ ಎಂದು ಯೋಚಿಸುತ್ತಿದ್ದರು. "ಈ ವ್ಯಕ್ತಿಯನ್ನು ಬಿಡು. ಅವನ ಬದಲಾಗಿ ನಿನಗೆ ಕೊಬ್ಬಿದ ಕೋಣ, ಕುರಿ ಕೋಳಿಗಳನ್ನು ಕೊಡುತ್ತೇವೆ" ಎಂದು ಪ್ರಾಣಿಬಲಿ ಕೊಡುತ್ತಿದ್ದರು. ಈ ಯತ್ನದಲ್ಲಿ ಅತಿ ಕ್ಲಿಷ್ಟವಾದ ಪೂಜಾ ವಿಧಾನಗಳನ್ನು ರೂಪಿಸಿದರು. ಭೂತೋಚ್ಚಾಟನೆ ಮಾಡುವುದೂ ಒಂದು ವಿಶೇಷ ಕಲೆ, ವಿದ್ಯೆ, ಸಾಮರ್ಥ್ಯ ವೆನಿಸಿಕೊಂಡು, ಕೆಲವರು ಅದರಲ್ಲಿ ಪಾರಂಗತರಾದರು. ಹಠಮಾರಿ ದೆವ್ವಗಳನ್ನು ಓಡಿಸಲು, ಅಷ್ಟೇ ಹಠಮಾರಿ, ಹಿಂಸಾತ್ಮಕ ವಿಧಾನಗಳನ್ನು ರೂಪಿಸಿದರು.

ದೇವರು ಸೃಷ್ಟಿಕರ್ತನೆಂದ ಮೇಲೆ, ಸರ್ವಶಕ್ತನೆಂದ ಮೇಲೆ, ಸತ್ತವರ ಪ್ರೇತಗಳಿಗಿಂತಲೂ ಶಕ್ತಿವಂತನಿರಲೇಬೇಕು. ದೇವರನ್ನು ಒಲಿಸಿ ಕೊಂಡರೆ, ಆತನನ್ನು ಸುಪ್ರೀತಗೊಳಿಸಿದರೆ, ಪ್ರೇತಗಳಿಂದ ನಮ್ಮನ್ನು ರಕ್ಷಿಸುತ್ತಾನೆ ಎಂದು ತರ್ಕಿಸಿದರು. ತಮ್ಮಲ್ಲಿ ಕೆಲವರು ವಿಶೇಷ ಧೈರ್ಯ ದಿಂದ, ಸಮಯೋಚಿತ ಚಾತುರ್ಯದಿಂದ ಸಂಕಷ್ಟಗಳನ್ನು ಎದುರಿಸಿ ಯಶಸ್ವಿಯಾದಾಗ, ಇತರ ದುರ್ಬಲರ ರಕ್ಷಣೆ ಮಾಡಿದಾಗ, ಅಂಥವರನ್ನು ದೈವ ಸ್ವರೂಪವೆಂದು ಭಾವಿಸಿದರು. ಉಳಿದವರಿಗೆ ಇಲ್ಲದ ಶಕ್ತಿಯನ್ನು ದೇವರೇ ಇವರಿಗೆ ಕರುಣಿಸಿದ ಎಂದು ವ್ಯಾಖ್ಯಾನಿಸಿದರು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಕೆಲವು ಸಂದರ್ಭಗಳಲ್ಲಿ ಮಾತ್ರ ಈ ಕೆಲವರು ವಿಶೇಷ ಶಕ್ತಿಸಾಮರ್ಥ್ಯಗಳನ್ನು ತೋರಿಸಬೇಕಾದರೆ, ಆ ಸಮಯದಲ್ಲಿ ದೇವರು ಅವರ ಮೈಮೇಲೆ ಬಂದಿರಬಾರದೇಕೆ ಎಂದು ಯೋಚಿಸಿದರು. ಜೊತೆಗೆ ಪ್ರತಿ ಗುಂಪಿನ ಯಜಮಾನನೂ ಉಳಿದವರ ಮೇಲೆ ತನ್ನ ಹಿಡಿತ ಸಾಧಿಸಲು, ತಾನೇ ದೇವಾಂಶ ಸಂಭೂತನೆಂದು

ಹೇಳಿಕೊಳ್ಳುತ್ತಿದ್ದ. "ರಾಜಾ ಪ್ರತ್ಯಕ್ಷ ದೇವತಾ" ಎಂಬ ಉಕ್ತಿ ಚಾಲ್ತಿಗೆ ಬಂದದ್ದು ಹೀಗೆ. ಕ್ರಮೇಣ, ತಾವು ಕಷ್ಟದಲ್ಲಿದ್ದಾಗ ದೇವರು ತಮ್ಮಾವ ರೊಬ್ಬರ ಮೇಲೆ ಬಂದು ಕಾಪಾಡುತ್ತಾನೆ, ದುಷ್ಟ ಶಕ್ತಿಗಳಿಂದ ತಮ್ಮನ್ನು ರಕ್ಷಿಸುತ್ತಾನೆ ಎಂಬ ಆಶಾವಾದ, ನಂಬಿಕೆ ಬಲವಾಗತೊಡಗಿತು. ಉಳಿದವ ರಿಗಿಂತ ಹೆಚ್ಚಿನ ಸಾಮರ್ಥ್ಯಗಳನ್ನು ತೋರಿಸಬಲ್ಲವರು, ರಕ್ಷಣೆಮಾಡ ಬಲ್ಲವರು ದೇವಾಂಶ ಸಂಭೂತರೆನಿಸಿಕೊಂಡರು.

ಹೀಗೆ ಪ್ರಪಂಚದಾದ್ಯಂತ ಮನುಷ್ಯನ ಮೇಲೆ ದೇವರು ಬರು ವುದು ಇತರರ ಕಲ್ಯಾಣಕ್ಕಾಗಿ, ನೆರವಿಗಾಗಿ; ಅಂದ ಮೇಲೆ ಅದು ಸ್ವಾಗ ತಾರ್ಹ ಎಂದು ಭಾವಿಸಿದರು. ಇದಕ್ಕೆ ವ್ಯತಿರಿಕ್ತವಾಗಿ, ಮನುಷ್ಯನ ಮೈಮೇಲೆ ದೆವ್ವ ಬರುವುದು ಒಂದು ಪೀಡನೆ, ದುಃಖದಾಯಕ ಸಂಗತಿ; ಅದನ್ನು ನಿವಾರಿಸಿಕೊಳ್ಳಬೇಕು ಎಂದು ಪರಿಗಣಿಸಿದರು.

### ಮೈಮೇಲೆ ದೇವರು, ದೆವ್ವ ಬರುವ ವಿದ್ಯಮಾನ

ಮನುಷ್ಯನ ಮೈಮೇಲೆ ದೇವರು, ದೆವ್ವ ಬಂದಾಗ ಆ ವ್ಯಕ್ತಿ ತನ್ನ ತನವನ್ನು ಕಳೆದುಕೊಳ್ಳುತ್ತಾನೆ. ಆತನ ಮುಖ ಚಹರೆಯೇ ಬದಲಾಗಿ ಬಿಡುತ್ತದೆ. ಧ್ವನಿ ಬೇರೆಯಾಗುತ್ತದೆ. ಆಗಿನ ಅವನ ಮಾತು, ವರ್ತನೆಗೂ ಅವನ ವ್ಯಕ್ತಿತ್ವಕ್ಕೂ ತಾಳೆಯೇ ಇರುವುದಿಲ್ಲ. ಮೈಮೇಲೆ ಬರುವ ದೇವರ ಗುಣವೈಶಿಷ್ಟ್ಯಗಳ ಬಗೆಗೆ ಏನು ಪ್ರಚಾರವಾಗಿರುತ್ತದೋ ಅದ ರಂತೆ ವ್ಯಕ್ತಿಯ ನಡೆ ನುಡಿ ಇರುತ್ತದೆ. ಉದಾಹರಣೆಗೆ, ಕೋಪಿಷ್ಠ ಅಥವಾ ಕ್ಷುದ್ರದೇವತೆ ಬಂದರೆ, ವ್ಯಕ್ತಿ ಸಿಟ್ಟು ಸೆಡವುಗಳನ್ನು ತೋರಿಸಿ ಕೂಗಿ ಕುಣಿದಾಡಬಹುದು, ಜನರತ್ತ ಅಬ್ಬರಿಸಿ ದೂರಬಹುದು, ಶಿಕ್ಷಿಸು ತ್ತೇನೆ ಎಂದು ಹೆದರಿಸಬಹುದು. ಇದಕ್ಕೆ ವಿರುದ್ಧವಾಗಿ ಗಂಭೀರ ಅಥವಾ ಶಾಂತ ಸ್ವಭಾವದ ದೇವತೆ ಬಂದರೆ, ಪ್ರಸನ್ನವದನನಾಗಿ ಆಶ್ವಾ ಸನೆ, ಆಶೀರ್ವಾದವನ್ನು ಮಾಡಬಹುದು. ದೆವ್ವವಾದರೆ, ಸಾಮಾನ್ಯ ವಾಗಿ ತಾನು ಯಾರು, ಹೆಸರೇನು, ತಾನು ಹೇಗೆ ಬಂದೆ, ಏಕೆ ಬಂದೆ, ಏನು ಬೇಕು ಎಂದು ವಿವರಿಸುತ್ತದೆ. ತನ್ನ ಗುರುತು ಸರಿಯಾಗಿ ಸಿಗು ವಂತೆ, ಜನ ನಂಬುವಂತೆ ಮಾಡಲು ಕೆಲವಾರು ವಿವರಗಳನ್ನು ಕೊಡು

ತ್ತದೆ. ಕೆಲವು ಸಾರಿ ಸತ್ತ ವ್ಯಕ್ತಿಯ ನಡೆನುಡಿಯನ್ನು ವ್ಯಕ್ತಿ ಅನುಕರಿಸುವುದು ನೋಡುವವರಿಗೆ ಕುತೂಹಲವನ್ನುಂಟುಮಾಡುವುದಲ್ಲದೆ, ನಂಬಿಕೆಯನ್ನು ತರುತ್ತದೆ. ದೇವರು, ದೆವ್ವ ಮೈಮೇಲೆ ಇರುವಷ್ಟು ಕಾಲ, ವ್ಯಕ್ತಿಗೆ ನೋವು ಮತ್ತು ಇತರ ಸಂವೇದನೆಗಳು ತಿಳಿಯುವುದಿಲ್ಲ. ದೇವರು, ದೆವ್ವ ಬಿಟ್ಟು ಹೋದ ಮೇಲೆ ವ್ಯಕ್ತಿಗೆ ಮರಳಿ ತನ್ನತನ ಬರಬೇಕಾದರೆ ಸ್ವಲ್ಪ ಸಮಯ ಬೇಕಾಗುತ್ತದೆ. ದೇವರು, ದೆವ್ವ ಬಂದ ಅವಧಿಯಲ್ಲಿ ತಾನಾಡಿದ ಮಾತುಗಳು, ತೋರಿದ ವರ್ತನೆಗಳು, ವ್ಯಕ್ತಿಗೆ ನೆನಪಿರುವುದಿಲ್ಲ. ಈ ರೀತಿ ಅವಧಿಗೊಂದಾವರ್ತಿ ಈ ವಿದ್ಯಮಾನ ಪುನರಾವರ್ತನೆ ಆಗುತ್ತದೆ.

### ವಿವಿಧ ಬಗೆ

ಮೈಮೇಲೆ ದೈವ ಅಥವಾ ದೆವ್ವ ಬರುವ ವಿದ್ಯಮಾನಗಳಲ್ಲಿ ನಾನಾ ವಿಧಗಳಿವೆ ಎಂದರೆ ನಿಮಗೆ ಆಶ್ಚರ್ಯವಾಗಬಹುದು. ಇದು ವೈಯಕ್ತಿಕವಾಗಿ ಒಬ್ಬರಿಗೆ ಮಾತ್ರ ಬರಬಹುದು ಅಥವಾ ಗುಂಪಿನಲ್ಲಿ ಹಲವರಿಗೆ ಒಟ್ಟಿಗೆ ಬರಬಹುದು. ಈ ವಿದ್ಯಮಾನ ಸಮಾಜದಲ್ಲಿ ಅಲ್ಲೊಬ್ಬರಿಗೆ ಇಲ್ಲೊಬ್ಬರಿಗೆ ಆಗಬಹುದು ಅಥವಾ ಸಾಂಕ್ರಾಮಿಕದಂತೆ ಹತ್ತಾರು ಮಂದಿಗೆ ಆಗಬಹುದು. ವ್ಯಕ್ತಿ ತನಗೆ ಬೇಕೆನಿಸಿದಾಗ, ಬೇಕಾದ ವೇಳೆಯಲ್ಲಿ ಸ್ವ ಇಚ್ಛೆಯಿಂದ ಮೈಮೇಲೆ ದೇವರನ್ನು ಬರಿಸಿಕೊಳ್ಳಬಹುದು ಅಥವಾ ವ್ಯಕ್ತಿಗೆ ಈ ಸಂಗತಿಯ ಮೇಲೆ ಯಾವ ಹತೋಟಿಯೂ ಇಲ್ಲದೆ ಹೋಗಬಹುದು. ಅನಿಯಂತ್ರಿತ ರೀತಿಯಲ್ಲಿ ಆತ ಅದಕ್ಕೆ ಒಳಗಾಗಬಹುದು. ವಿಶೇಷ ಧಾರ್ಮಿಕ ಸಮಾರಂಭಗಳಲ್ಲಿ ಅಥವಾ ಇನ್ನ್ಯಾವುದೇ ಸಾಮಾನ್ಯ ಸಮಾರಂಭಗಳಲ್ಲಿ ಕಾಣಿಸಿಕೊಳ್ಳಬಹುದು. ಇದು ಕೆಲವು ಸಾರಿ ಮಾನಸಿಕ ಕಾಯಿಲೆಗಳ ಚಿಹ್ನೆಯಾಗಿ ಪ್ರಕಟಗೊಳ್ಳಬಹುದು.

### ವೈಯಕ್ತಿಕ ಹಾಗೂ ಅನಿಯಂತ್ರಿತ ವಿದ್ಯಮಾನ

ನಮ್ಮ ದೇಶದಲ್ಲಿ, ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ, ಇದು ಬಹಳ ಸಾಮಾನ್ಯ. ನಮ್ಮ ದೇಶದಲ್ಲಿ ಅಷ್ಟೇ ಅಲ್ಲ, ಪ್ರಪಂಚದಾದ್ಯಂತ

ಈ ಬಗೆಯ ವಿಶೇಷಕ್ಕೆ ತುತ್ತಾಗುವವರು ಸಾಮಾನ್ಯವಾಗಿ 15 ರಿಂದ 30 ವರ್ಷ ವಯಸ್ಸಿನ ಮಹಿಳೆಯರು. ಇವರಲ್ಲಿ ಬಹುಪಾಲು ಹೆಚ್ಚು ವಿದ್ಯಾವಂತರಲ್ಲ. ಹತ್ತು ವರ್ಷಕ್ಕೂ ಹೆಚ್ಚು ಸಮಯ ಶಾಲೆಗೆ ಹೋದವರಲ್ಲಿ ಈ ವಿದ್ಯಮಾನ ಅಪರೂಪ ಎನ್ನುವುದು ಗಮನಾರ್ಹ. ಅಂದರೆ, ಈ ಮಟ್ಟದ ವಿದ್ಯಾಭ್ಯಾಸದಿಂದ ವ್ಯಕ್ತಿಗಳಲ್ಲಿ ವೈಜ್ಞಾನಿಕ ಆಲೋಚನೆ, ಜಾಗೃತಿ ಮೂಡಿ, ಈ ಬಗೆಯ ನಂಬಿಕೆಗಳಿಗೆ ಎಡೆ ಇಲ್ಲದಂತಾಗುತ್ತದೆ ಎಂದರ್ಥ. ಹೆಚ್ಚಿನ ಪ್ರಕರಣಗಳಲ್ಲಿ ಮಹಿಳೆಯರ ಮೇಲೆ ದೆವ್ವ ಬರುತ್ತದೆ, ಸತ್ತ ಸಂಬಂಧಿಕರ ಅಥವಾ ಅಪರಿಚಿತರ ಪ್ರೇತ ಬಂದು ಕಾಡುತ್ತದೆ. ಅದರ ಮೇಲೆ ವ್ಯಕ್ತಿಗೆ ಹತೋಟಿ ಇದ್ದಂತೆ ಕಾಣುವುದಿಲ್ಲ. ದೇವರು, ದೆವ್ವ ಬಂದಾಗ ವ್ಯಕ್ತಿಯು ಚಪರೆ ಜವಲಾಗಿ, ಸುತ್ತುಮುತ್ತಲಿನವರ ಮೇಲೆ ಅಧಿಕಾರ ಚಲಾಯಿಸುತ್ತದೆ. "ಹೀಗೆ ಮಾಡಿ, ಹಾಗೆ ಮಾಡಬೇಡಿ" ಎಂದು ಅಜ್ಞಾಪಿಸುತ್ತದೆ. ಸ್ವಲ್ಪ ಹೊತ್ತಿದ್ದು ಬಿಟ್ಟಾಗ, ವ್ಯಕ್ತಿ ಸುಸ್ತಾಗಿ ಮಲಗಿಕೊಳ್ಳುತ್ತಾನೆ. ಎದ್ದಾಗ ಅವನು ಮೊದಲಿನ ವ್ಯಕ್ತಿಯಾಗುತ್ತಾನೆ. ದೆವ್ವ ಹಿಡಿದಂತೆ ಆಡುವ ಅವಧಿ ಕೆಲವು ನಿಮಿಷಗಳಾಗಬಹುದು, ಕೆಲವು ಗಂಟೆಗಳಾಗಬಹುದು, ಅಪರೂಪಕ್ಕೆ ದಿನಪೂರ್ತಿ ಇರಬಹುದು. ಸಾಮಾನ್ಯವಾಗಿ ವ್ಯಕ್ತಿಯನ್ನು ಸಮಸ್ಯೆಗಳು ತೀವ್ರವಾಗಿ ಕಾಡಿದಾಗ, ಆತ ಸಂಕಷ್ಟದಲ್ಲಿದ್ದಾಗ, ಆಪಿತ ಸಂದರ್ಭಗಳಲ್ಲಿ ಈ ವಿದ್ಯಮಾನ ಕಂಡುಬರುವುದು ಒಂದು ವಿಶೇಷ.

## ಹತೋಟಿಯಲ್ಲಿರುವ ವೈಯಕ್ತಿಕ ವಿದ್ಯಮಾನ

ಈ ವಿದ್ಯಮಾನದಲ್ಲಿ ಸಾಮಾನ್ಯವಾಗಿ ದೇವರು ವ್ಯಕ್ತಿಯ ಮೈಮೇಲೆ ಬರುತ್ತದೆ. ಸಾಮಾನ್ಯವಾಗಿ ವ್ಯಕ್ತಿ ಪೂಜಾರಿ ಅಥವಾ ಸಾಂಪ್ರದಾಯಿಕ ಚಿಕಿತ್ಸಕನಾಗಿರುತ್ತಾನೆ. ಜನ ತಮ್ಮ ಸಮಸ್ಯೆಗಳನ್ನು, ಕಷ್ಟ ನಷ್ಟಗಳನ್ನು ಅಥವಾ ರೋಗರುಜಿನಗಳನ್ನು ತನ್ನಲ್ಲಿಗೆ ತಂದಾಗ ಪರಿಹಾರ ಸೂಚಿಸುತ್ತಾನೆ. ಅಮಾವಾಸ್ಯೆ, ಪೌರ್ಣಿಮೆ, ಮಂಗಳವಾರ, ಶುಕ್ರವಾರ ಇತ್ಯಾದಿ ನಿಗದಿಮಾಡಿದ ದಿನಗಳಲ್ಲಿ ದೇವರು ಪೂಜಾರಿಯ ಮೈಮೇಲೆ ಬರುತ್ತದೆ. ಆವಶ್ಯಕತೆ ಬಿದ್ದರೆ, ಬೇರೆ ದಿನಗಳಲ್ಲೂ ವಿಶೇಷ ಪ್ರಯತ್ನದಿಂದ ದೇವ

ರನ್ನು ಬರಿಸಿಕೊಳ್ಳಬಲ್ಲ ಆತ, ಹಲವಾರು ಕಟ್ಟುಕಟ್ಟಳೆಗಳನ್ನು ಪಾಲಿಸಬೇಕಾಗುತ್ತದೆ. ಮದ್ಯಪಾನ, ಹೊಗೆಸೊಪ್ಪು, ಮಾಂಸಾಹಾರ ನಿಷಿದ್ಧ. ಲೈಂಗಿಕ ಸುಖ, ಇತರ ಸುಖಭೋಗಗಳು ತಾತ್ಕಾಲಿಕವಾಗಿ ವರ್ಜ್ಯ. ಆ ದಿನ ಬೆಳಿಗ್ಗೆ ಎದ್ದು ಸ್ನಾನಮಾಡಿ, ಮಡಿ ಉಟ್ಟು, ಅಲ್ಪಾಹಾರ ಅಥವಾ ನಿರಾಹಾರದಿಂದಿದ್ದು ಪೂಜೆಗೆ ಸಿದ್ಧನಾಗಬೇಕು. ಇದರಲ್ಲಿ ಸ್ವಲ್ಪ ವ್ಯತ್ಯಾಸವಾದರೆ, ಮೈಲಿಗೆ ಅನಾಚಾರವಾದರೆ, ಅರ್ಚಕನ ಮೇಲೆ ದೇವರು ಮುನಿದು ಕೇಡುಂಟುಮಾಡುತ್ತಾನೆ ಎಂದು ನಂಬಿಕೆ. ದೇವರು ಬಂದ ಅವಧಿಯಲ್ಲಿ ನಡೆಯುವ ಘಟನೆಗಳು ಅರ್ಚಕನಿಗೆ ಗೊತ್ತಾಗದು. ಆಗ ಆವನ ಬಾಯಿಯಿಂದ ಬರುವ ಮಾತುಗಳೆಲ್ಲಾ ದೇವರಾಡುವ ಮಾತುಗಳೇ ಎಂಬುದು ನಂಬಿಕೆ. ಮೈಮೇಲೆ ದೇವರು ಬಂದ ಸೂಚನೆಯಾಗಿ, ಅರ್ಚಕ ದೇವರ ಗುಣಲಕ್ಷಣಗಳನ್ನು ಪ್ರಕಟಿಸುತ್ತಾನೆ. ಉದಾಹರಣೆಗೆ, ನಾಗದೇವತೆ ಮೈಮೇಲೆ ಬರುತ್ತದೆ ಎನ್ನಲಾದ ವ್ಯಕ್ತಿ ನೃತ್ಯವನ್ನು ಮಾಡುತ್ತಾನೆ. ಮೈನಡುಗಿ, ಕುಣಿಯಲಾರಂಭಿಸುತ್ತಾನೆ.

**ಸಾಮೂಹಿಕ ವಿದ್ಯಮಾನ**

ಸಾಮೂಹಿಕವಾಗಿ ಹಲವರ ಮೈಮೇಲೆ ದೈವ ಅಥವಾ ದೆವ್ವ ಬರುವುದು ಕೂಡ ಜಗತ್ತಿನೆಲ್ಲೆಡೆ ಕಂಡುಬರುತ್ತದೆ. ಇದು ಧಾರ್ಮಿಕ ಅಥವಾ ಸಾಂಸ್ಕೃತಿಕ ಸಮಾರಂಭಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ನಮ್ಮ ದೇಶದಲ್ಲಿ ಎಲ್ಲೆಡೆ ಅನೇಕ ದೇವಾಲಯ, ಪುಣ್ಯಕ್ಷೇತ್ರಗಳಲ್ಲಿ, ಪೂಜಾ ಮಂದಿರಗಳಲ್ಲಿ, ಜಾತ್ರೆ ಉತ್ಸವಗಳಲ್ಲಿ ಈ ವಿದ್ಯಮಾನವನ್ನು ಕಾಣಬಹುದು. ಸಣ್ಣ ಸಣ್ಣ ಊರು, ಹಳ್ಳಿಗಳಲ್ಲಿ ಊರ ಹಬ್ಬ, ಜಾತ್ರೆಗಳಲ್ಲಿ, ದೇವರು ಭಕ್ತಾದಿಗಳ ಮೈಮೇಲೆ ಬರುವುದು ಸಾಮಾನ್ಯ ದೃಶ್ಯ. ಈಜಿಪ್ಟ್, ಇಥಿಯೋಪಿಯ, ಸೂಡಾನ್, ಅರೇಬಿಯ, ಉತ್ತರ ಆಫ್ರಿಕಾ ಮುಂತಾದ ದೇಶಗಳಲ್ಲಿ ನಡೆಯುವ 'ಜಾರ್ ಸಮಾರಂಭಗಳು, ಹೈತಿಯಲ್ಲಿ ಜರುಗುವ ವೂಡೂ ಸಮಾರಂಭ, ಲೈಬೀರಿಯಾದಲ್ಲಿ ನಡೆಯುವ ಚಿಕಿತ್ಸಾ ಸಮಾರಂಭಗಳು, ಬ್ರೆಜಿಲ್‌ನ ಕ್ಯಾಂಡಾಬಲ್ ಪಂಥ–ಇವೆಲ್ಲಾ ಸಾಮೂಹಿಕವಾಗಿ ದೈವ, ದೆವ್ವ ಜನರ ಮೈಮೇಲೆ ಬರುವ ಉದಾಹರಣೆಗಳು. ಈ ಎಲ್ಲ ಸಮಾರಂಭಗಳಲ್ಲಿ ಹಲವಾರು ಸಮಾನ ಲಕ್ಷಣಗಳನ್ನು ಕಾಣಬಹುದು.

೧. ಈ ಸಂದರ್ಭಗಳಲ್ಲಿ, ದೇವರು ಅಥವಾ ಭೂತಪ್ರೇತಗಳು ಮೈಮೇಲೆ ಬರುತ್ತವೆ ಎಂಬ ಬಲವಾದ ನಂಬಿಕೆ ಮತ್ತು ನಿರೀಕ್ಷೆ ಎಲ್ಲರಲ್ಲಿರುತ್ತದೆ.

೨. ಈ ಸಂದರ್ಭಗಳಲ್ಲಿ ನಾಯಕತ್ವ ವಹಿಸುವ ಪ್ರಧಾನ ವ್ಯಕ್ತಿ (ಅರ್ಚಕ, ಗುರು) ಇತರರ ಮನಸ್ಸಿನ ಮೇಲೆ ಪರಿಣಾಮ ಬೀರುವಂತಹ ಆಕರ್ಷಣೀಯ ವ್ಯಕ್ತಿತ್ವದವನಾಗಿರುತ್ತಾನೆ.

೩. ಲಯಬದ್ಧವಾಗಿ ಸದ್ದುಮಾಡುವ ಡೋಲು, ಢಕ್ಕೆ, ತಾಳ, ತಮಟೆ, ಜಾಗಟೆ ಮುಂತಾದ ವಾದ್ಯಗಳಿಂದ ಒಂದು ರೀತಿಯ ಪ್ರಚೋದಕ ಹಾಗೂ ಉದ್ರೇಕಕಾರಿ ಸಂಗೀತ ಅಥವಾ ಕುಣಿತವಿರುತ್ತದೆ. ಇದರ ಗುಂಗಿನಲ್ಲಿ, ತಟಸ್ಥ ನೋಡುಗರ ಕಾಲುಗಳೂ ಅವರಿಗೆ ಅರಿವಿಲ್ಲದಂತೆ ತಾಳಹಾಕಲು, ಕುಣಿಯಲು ತೊಡಗುತ್ತವೆ.

೪. ಇಂತಹ ಸಂದರ್ಭಗಳಲ್ಲಿ ಮೈಮೇಲೆ ದೇವರು, ಅಥವಾ ದೆವ್ವ ಬರುವುದು ಒಂದು ಹೆಚ್ಚುಗಾರಿಕೆ, ಸರ್ವಸಮ್ಮತ ನಡೆವಳಿಕೆ ಎಂದು ಪರಿಗಣಿಸಲಾಗುತ್ತದೆ. ಬಂದಿದ್ದವರು 'ಅಯ್ಯೋ ನಮ್ಮ ಮೈಮೇಲೆ ಬರಲಿಲ್ಲವಲ್ಲ' ಎಂದು ನಿರಾಶೆ ಪಡುವಂತಹ ವಾತಾವರಣ ಇರುತ್ತದೆ.

## ಮೈಮೇಲೆ ಬರುವ ದೇವರು, ದೆವ್ವಗಳ ವೈವಿಧ್ಯ

ನಮ್ಮ ಧರ್ಮದ, ಸಂಸ್ಕೃತಿಯ ಎಲ್ಲ ದೇವರುಗಳೂ ಅರ್ಚಕರ ಅಥವಾ ಭಕ್ತರ ಮೈಮೇಲೆ ಬರುವುದಿಲ್ಲ. ಕೆಲವು ದೇವತೆಗಳು, ಮುಖ್ಯವಾಗಿ ಕ್ಷುದ್ರ ದೇವತೆಗಳು, ಹೆಚ್ಚಾಗಿ ಈ ರೀತಿ ಕಾಣಿಸಿಕೊಳ್ಳುತ್ತವೆ. ಕಾಳಿ, ದುರ್ಗಿ, ಭೈರವಿ, ಸ್ಥಳೀಯ ಊರ ದೇವತೆಗಳು, ಎಲ್ಲಮ್ಮ, ಮಾರಮ್ಮ, ಕಾವೇರಮ್ಮ, ಸಿದ್ದಮ್ಮ, ಚೌಡಿ ಇತ್ಯಾದಿ, ಶಿವನ ಗಣಗಳು, ಭೂತರಾಯ, ವೀರಭದ್ರ, ಕೆಂಚುಟಿಕ, ಪಂಜುರ್ಲಿ, ಕಾಟ, ಒಂಟಿ ಇತ್ಯಾದಿ ಶಿವನ ಸ್ಥಳೀಯ ರೂಪಗಳು, ಹನುಮಂತ, ಶನಿಮಹಾತ್ಮ ಇತ್ಯಾದಿ.

ಇನ್ನು ದೆವ್ವಗಳ ವಿಷಯ. ವ್ಯಕ್ತಿಯನ್ನು ಹಿಡಿದು ಕಾಡುವ ಪ್ರೇತ ಸತ್ತ ಸಂಬಂಧಿಕರ ಅಥವಾ ಸ್ನೇಹಿತರದ್ದಾಗಿರಬಹುದು ಅಥವಾ ಅಪರಿಚಿತ ವ್ಯಕ್ತಿಯದ್ದಾಗಿರಬಹದು. ದೆವ್ವ ಗಂಡಾಗಬಹುದು, ಹೆಣ್ಣಾಗಬಹುದು. ವಯಸ್ಸಿನಲ್ಲಿ ಅದು ಮರಿ ದೆವ್ವವಾಗಬಹುದು, ಮುದಿ ದೆವ್ವವಾಗ ಬಹುದು! ವ್ಯಕ್ತಿಯ ಧರ್ಮ, ಸತ್ತ ಮೇಲೂ ಅವನನ್ನು ಬಿಡುವಂತೆ ಕಾಣದು. ಏಕೆಂದರೆ ಹಿಂದೂ ದೆವ್ವ, ಮುಸ್ಲಿಂ ದೆವ್ವ, ಕ್ರಿಶ್ಚಿಯನ್ ದೆವ್ವ ಎಂದೂ ವಿಂಗಡಿಸುತ್ತಾರೆ. ಇದರಲ್ಲಿ ಮುಸ್ಲಿಂ ದೆವ್ವಗಳು ಬಹು ಘಾಟಿ, ಹಠಮಾರಿಗಳಂತೆ. ಸಾಮಾನ್ಯವಾಗಿ ಚಿಕ್ಕ ವಯಸ್ಸಿನಲ್ಲಿ ದುರ್ಮರಣಕ್ಕೆ ಈಡಾದ ವ್ಯಕ್ತಿಗಳು ಮತ್ತು ತಮ್ಮ ಆಸೆಗಳನ್ನು ಪೂರೈಸಿಕೊಳ್ಳಲಾಗದೆ ಅತೃಪ್ತರಾಗಿ ಸತ್ತ ನತದೃಷ್ಟರು ಅಥವಾ ದುರಾಶೆ, ಮಹತ್ವಾಕಾಂಕ್ಷೆಯ ವ್ಯಕ್ತಿಗಳು ಪ್ರೇತಗಳಾಗಿ ತಿರುಗುತ್ತಾರೆ, ಇತರರನ್ನು ಕಾಡುತ್ತಾರೆ ಎಂಬುದು ಜನರ ನಂಬಿಕೆ. ಕೆಲವು ಸಾರಿ ಧಾರ್ಮಿಕ ನಾಯಕರು, ಮಹಾಮಹಿಮರು ಸಾಧು ಸನ್ಯಾಸಿಗಳು, ಗುರುಗಳು ಪ್ರೇತಗಳಾಗಿ ತಮ್ಮ ಅನುಯಾಯಿಗಳ ಮೇಲೆ ಮತ್ತು ಭಕ್ತರ ಮೇಲೆ ಬರುವುದುಂಟು.



ಒಂದು ವ್ಯಕ್ತಿಯ ಮೈಮೇಲೆ ಒಮ್ಮೆಗೇ ಒಂದಕ್ಕಿಂತ ಹೆಚ್ಚು ದೇವರು ಅಥವಾ ದೆವ್ವ ಬಂದ ಪ್ರಕರಣ ಎಲ್ಲೂ ವರದಿಯಾಗಿಲ್ಲ. ಸಾಮಾನ್ಯವಾಗಿ ಒಬ್ಬನ ಮೇಲೆ ಒಂದು ದೇವರು ಅಥವಾ ಒಂದು ದೆವ್ವ ಬರುತ್ತದೆ. ಅಪರೂಪಕ್ಕೆ ಒಬ್ಬನ ಮೇಲೆ ದೇವರು ಅಥವಾ ದೆವ್ವ ಬೇರೆ ಬೇರೆ ಅವಧಿಯಲ್ಲಿ ಅಥವಾ ಸರದಿಯಂತೆ ಬರಬಹುದು. ಈ ರೀತಿ ಒಂದಕ್ಕಿಂತ ಹೆಚ್ಚು ದೆವ್ವಗಳು ಬಂದಾಗ, ಪ್ರತಿ ದೆವ್ವಕ್ಕೂ ಇನ್ನೊಂದು ದೆವ್ವದ ಪರಿಚಯ ಇರುತ್ತದೆ! ದೆವ್ವಗಳಲ್ಲಿ ಕೆಲವು ಒಳ್ಳೆಯವು. ವ್ಯಕ್ತಿಗೆ ಹಾನಿ ಮಾಡುವುದಿಲ್ಲ, ಕೇವಲ ಪ್ರೀತಿಗಾಗಿ ಬಂದು ಹೋಗುತ್ತವೆ. ಕೆಲವು ಕೆಟ್ಟವು. ಕಿಡಿಗೇಡಿತನದಿಂದ, ದುಷ್ಟತನದಿಂದ ವ್ಯಕ್ತಿಗೆ ಹಾನಿ ಮಾಡುತ್ತವೆ. ಇದು ಚಾಲ್ತಿಯಲ್ಲಿರುವ ನಂಬಿಕೆ.

## ವೈಜ್ಞಾನಿಕ ವಿವರಣೆ

ಮನುಷ್ಯರ ಮೇಲೆ ದೇವರು, ಭೂತ, ಪ್ರೇತಗಳು ಬರುವ

ವಿದ್ಯಮಾನವನ್ನು ಜಗತ್ತಿನಾದ್ಯಂತ ಮಾನವ ಶಾಸ್ತ್ರಜ್ಞರು, ಸಮಾಜ ವಿಜ್ಞಾನಿಗಳು ಮತ್ತು ಮನೋವಿಜ್ಞಾನಿಗಳು ಆಳವಾಗಿ ಅಧ್ಯಯನ ಮಾಡಿದ್ದಾರೆ. ಸರ್ವಸಮ್ಮತವಾದ ಅರ್ಥವನ್ನು, ವಿವರಣೆಯನ್ನು ಕೊಡುವುದಕ್ಕೆ ಇನ್ನೂ ಸಾಧ್ಯವಿಲ್ಲವಾದರೂ ಸದ್ಯಕ್ಕೆ ಲಭ್ಯವಿರುವ ವೈಜ್ಞಾನಿಕ ಸೂತ್ರಗಳ ಪ್ರಕಾರ ಈ ವಿದ್ಯಮಾನವನ್ನು ಅರ್ಥೈಸಿದ್ದಾರೆ. ಸಾಂಸ್ಕೃತಿಕವಾಗಿ, ಮಾನಸಿಕವಾಗಿ ಈ ವಿದ್ಯಮಾನವನ್ನು ವಿವರಿಸಿದ್ದಾರೆ.

**ಸಾಂಸ್ಕೃತಿಕ ಹಾಗೂ ಸಾಮಾಜಿಕ ವಿವರಣೆ**

ಹೈತಿ ದ್ವೀಪದಲ್ಲಿ ಈ ವಿದ್ಯಮಾನವನ್ನು ಆಳವಾಗಿ ಅಧ್ಯಯನ ಮಾಡಿದ ಪ್ರೊ॥ ಆರೀಶೇವ್‌ರ ಪ್ರಕಾರ ಮೈಮೇಲೆ ದೇವರು, ದೆವ್ವ ಬರುವುದು ಒಂದು ವಿಶೇಷ ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಗತಿ. ''ಈ ದ್ವೀಪದಲ್ಲಿ ಪ್ರತಿಯೊಂದು ಮಗುವೂ ತನ್ನ ಹಿರಿಯರ ಮೇಲೆ ದೇವರು, ದೆವ್ವ ಬರುವುದನ್ನು ನೋಡುತ್ತಾ ಬೆಳೆಯುತ್ತದೆ. ದೇವರು ಮೈಮೇಲೆ ಬರುವ ವ್ಯಕ್ತಿಗೆ (ಹಂಗನ್) ದೊರೆಯುವ ಮಾನ್ಯತೆ ಗೌರವಗಳನ್ನು ಗಮನಿಸುತ್ತದೆ. ಒಂದಲ್ಲ ಒಂದು ಸಂದರ್ಭದಲ್ಲಿ ತನ್ನ ಮೇಲೂ ದೇವರು ಬಂದರೆ ಎಷ್ಟು ಚೆನ್ನ ಎಂದು ಆಶಿಸಿ, ನಿರೀಕ್ಷಿಸುತ್ತದೆ. ಹಾಗೆಯೇ ಒಂದು ದಿನ ಈ ವಿಶೇಷ ನಡೆವಳಿಕೆಯನ್ನು ಪ್ರಕಟಿಸಿಯೂ ಬಿಡುತ್ತದೆ'' ಎಂದು ಈ ಮನೋವಿಜ್ಞಾನಿ ನುಡಿದಿದ್ದಾರೆ. ಭಾರತದ ರಾಜಸ್ಥಾನದಲ್ಲಿ ಅಧ್ಯಯನ ಮಾಡಿದ ಪ್ರೊ॥ ಮೋಲಿಸ್ ಕಾರ್ಸ್ಟೇರ್ಸ್ ಅವರು, ''ಇಲ್ಲಿನ ಜನ ತಮ್ಮಲ್ಲೇ ಕೆಲವರ ಮೇಲೆ ದೇವರು. ದೆವ್ವ ಬರುವುದನ್ನು ಕಾಣುತ್ತಾರೆ. ತಮಗೂ ಆಗಬಹುದೆಂದು ಅಂದು ಕೊಳ್ಳುತ್ತಾರೆ. ತಕ್ಕ ಸಂದರ್ಭದಲ್ಲಿ ಅಂತೆಯೇ ಆಗಿಯೂ ಬಿಡುತ್ತದೆ'' ಎಂದು ಬರೆದಿದ್ದಾರೆ. ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಿರಿಪಂಥದ ಬಗ್ಗೆ ಅಧ್ಯಯನ ಮಾಡಿದ ಪಿ. ಜೆ. ಕ್ಲಾಸ್ ಅವರು ಈ ರೀತಿ ಅಭಿಪ್ರಾಯ ಪಡುತ್ತಾರೆ: ''ಈ ಸಾಂಸ್ಕೃತಿಕ ವಾತಾವರಣದಲ್ಲಿ ಈ ವಿದ್ಯಮಾನ ಜನರ ಮನಸ್ಸಿನ ಮೇಲೆ ಎಂತಹ ಗಾಢ ಪರಿಣಾಮ ಬೀರಿದೆ ಎಂದರೆ, ಪ್ರತಿಯೊಬ್ಬನೂ ಮಾನಸಿಕವಾಗಿ ತನ್ನ ಮೇಲೆ ದೇವರು ಅಥವಾ ದೆವ್ವವನ್ನು ಬರಿಸಿ

ಕೊಳ್ಳಲು ಸಜ್ಜಾಗಿರುತ್ತಾನೆ. ಈ ಸಮಾಜದಲ್ಲಿ ಇದು ಒಂದು ಅತಿ ನಿರೀಕ್ಷೆಯ ವರ್ತನೆ. ಸಾಮಾಜಿಕ ಒತ್ತಡಕ್ಕೆ ಒಳಗಾದ ವ್ಯಕ್ತಿ ಅಪ್ರಜ್ಞಾ ಪೂರ್ವಕವಾಗಿ ಈ ನಿರೀಕ್ಷಿತ ನಡವಳಿಕೆಯನ್ನು ತೋರಿಸಿ ಬಿಡುತ್ತಾನೆ.''

ತಲತಲಾಂತರದಿಂದ ಉಳಿದು ಬಂದ ನಂಬಿಕೆಯಿಂದಾಗಿ, ಸುತ್ತ ಮುತ್ತಲಿನ ಪರಿಸರದಲ್ಲಿ ಈ ಸಂಗತಿ ನಡೆಯುತ್ತಿರುವಾಗ ವ್ಯಕ್ತಿಯ ಮನಸ್ಸು ಇದನ್ನು ಒಪ್ಪಿಕೊಂಡು ಸ್ವ ಸೂಚನೆ (ಆಟೋಸಜೆಶನ್) ಇತ್ತು ಕೊಂಡು, ಅದೇ ವರ್ತನೆಯನ್ನು ಪ್ರಕಟಿಸುತ್ತದೆ ಎಂಬ ಈ ವಾದಕ್ಕೆ ಉದಾಹರಣೆ ಸಿದ್ದಪ್ಪನ ಪ್ರಕರಣ.

ಹದಿನೆಂಟು ವರ್ಷದ ಸಿದ್ದಪ್ಪ ಮಂಡ್ಯ ತಾಲ್ಲೂಕಿನ ಹಳ್ಳಿಯೊಂದರ ನಿವಾಸಿ. ಹೊಟ್ಟೆ ಬಟ್ಟೆಗೆ ಸಾಲುವಷ್ಟು ಸಂಪಾದನೆ ಇದೆ. ಮೂರು ತಿಂಗಳ ಹಿಂದೆ ಆತನ ಹಳ್ಳಿಯ ಯುವತಿಯೊಬ್ಬಳು ಆತನ ಜಮೀನಿನ ಪಕ್ಕದಲ್ಲಿರುವ ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡಿದ್ದಳು. ಇದಾದ ಎರಡು ವಾರದಲ್ಲೆ ಸಿದ್ದಪ್ಪನ ಸೋದರ ಸಂಬಂಧಿಯಾದ ಮಾರಕ್ಕ, ಗಂಡನೊಡನಿದ್ದ ತೀವ್ರ ಮನಸ್ತಾಪ, ಜಗಳದಿಂದ ಬೇಸತ್ತು,ಅದೇ ಬಾವಿಗೆ ಬಿದ್ದು ಪ್ರಾಣ ಕಳೆದುಕೊಂಡಳು. ಹೀಗೆ ದುರ್ಮ ರಣಕ್ಕೀಡಾದ ಈ ಪ್ರೌಢ ವಯಸ್ಸಿನ ಮಹಿಳೆಯರ ಪ್ರೇತಗಳು ಬಾವಿಯ ಸುತ್ತ ಮುತ್ತ ಓಡಾಡುತ್ತಿವೆ ಎಂದು ಜನ ಮಾತಾಡಿಕೊಳ್ಳಲಾರಂಭಿಸಿ ದರು. ಚಿಕ್ಕ ವಯಸ್ಸಿನ ಹೆಂಗಸರು ಸತ್ತಾಗ ಮೋಹಿನಿಯರಾಗುತ್ತಾರೆ, ಲೈಂಗಿಕ ಕಾಮನೆಯಿಂದ ದಷ್ಟಪುಷ್ಟ ಯುವಕರನ್ನು ಹಿಡಿದುಕೊಂಡು ಅವರ ವೀರ್ಯವನ್ನು ಹೀರಿ ಬಿಡುತ್ತಾರೆ, ಆ ಯುವಕರು ಶಾರೀರಕವಾಗಿ ಮತ್ತು ಲೈಂಗಿಕವಾಗಿ ದುರ್ಬಲರಾಗಿ ನರಳ ಬೇಕಾಗುತ್ತದೆ ಎಂಬ ನಂಬಿಕೆ ಪ್ರಚಲಿತವಿದೆ. ಹಳ್ಳಿಯಲ್ಲಿ ಈ ಬಗೆಯ ಆತಂಕ ತಾಂಡವವಾಡುತ್ತಿದ್ದಾಗ ಇಬ್ಬರು ಬುಡುಬುಡುಕೆಯವರು ಅಲ್ಲಿಗೆ ಬಂದು, ''ಎರಡು ಹೆಣ್ಣು ದೆವ್ವ ಗಳು ಈ ಹಳ್ಳಿಯವರನ್ನು ಕಾಡುತ್ತಿವೆ. ಮುಖ್ಯವಾಗಿ ಪಡ್ಡೆಹುಡುಗರು, ನಡುವಯಸ್ಸಿನ ಗಂಡಸರು ವಿಶೇಷ ಎಚ್ಚರಿಕೆಯಿಂದ ಇರಬೇಕು'' ಎಂದು ಸಾರಿ ಹೋದರು. ಹೆದರಿದವರ ಮೇಲೆ ಹಾವೆಸೆದಂತಾಯಿತು. ಎಲ್ಲರೂ ಈ ವಿಚಾರವನ್ನು ಮಾತಾಡಿಕೊಳ್ಳಲಾರಂಭಿಸಿದರು. ಯಾರಿಗೆ,

ಯಾವ ಘಳಿಗೆಯಲ್ಲಿ ವಿಪತ್ತು ಕಾದಿದೆಯೋ, ಮೋಹಿನಿಗಳು ಯಾರನ್ನು ಮೆಟ್ಟಿಕೊಳ್ಳುತ್ತಾರೋ ಎಂದು ಕಂಗಾಲಾದರು. ಒಂದು ದಿನ ಸಿದ್ದಪ್ಪನ ಅಣ್ಣನ ಮಗ ಲಕ್ಕ, ಮಲಗಿದ್ದವನು ಇದಕ್ಕಿದ್ದಂತೆ ಒದ್ದಾಡಲಾರಂಭಿಸಿದ. ಗಾಬರಿಗೊಂಡ ಅವನ ಮನೆಯವರು, ಏನಾಗುತ್ತದೆ ಎಂದು ಕೇಳಿದಾಗ ಅವನು ಮಾತಾಡಲಿಲ್ಲ. ಸುಮ್ಮನೆ ಮಲಗಿರುತ್ತಿದ್ದ. ಆದುವರೆಗೆ ಚೆನ್ನಾಗಿದ್ದವನಿಗೆ ದಿಢೀರನೆ ಹೀಗಾಗಬೇಕಾದರೆ, ಇದು ಮೋಹಿನಿಯ ಕಾಟವೇ ಇರಬೇಕೆಂದು ನಿರ್ಧರಿಸಿ, ಓಡಿಹೋಗಿ ಎಲ್ಲಮ್ಮ ದೇವರ ಪೂಜಾರಿಯನ್ನು ಕರೆತಂದರು.ಅವನು ಹುಡುಗನನ್ನು ನೋಡಿ'ಹೌದು ಇದು ಮೋಹಿನಿಯ ಪೀಡೆಯೇ" ಎಂದು ಹೇಳಿ, ಮಂತ್ರವನ್ನು ಹಾಕಿ ಹೋದ. ಸ್ವಲ್ಪ ಹೊತ್ತಿನ ನಂತರ ಲಕ್ಕ ಚೇತರಿಸಿಕೊಂಡ. ತಾನು ಸಿದ್ದಪ್ಪನ ಹೊಲದ ಕಡೆ ಹೋಗಿದ್ದಾಗ ಬಾವಿಯ ಬಳಿ ಏನೋ ಬೆಳ್ಳಗೆ ಕಂಡಂತಾಯಿತೆಂದೂ, ಭಯವಾಗಿ ಮನೆಗೆ ಬಂದು ಮಲಗಿದೆನೆಂದೂ ಯಾರೋ ತನ್ನಮೇಲೆ ಅಗತುಕೊಂಡು, ಕತ್ತು ಹಿಸುಕಿದಂತಾಯಿತು ಎಂದೂ ಬಡಬಡಿಸಿದ. ಲಕ್ಕನನ್ನು ಮೋಹಿನಿ ಹಿಡಿದುಕೊಂಡದ್ದೂ ಕತ್ತು ಹಿಸುಕಲು ಯತ್ನಿಸಿದ್ದೂ ಕ್ಷಣಾರ್ಧದಲ್ಲಿ ಊರಲ್ಲೆಲ್ಲಾ ಡಂಗುರ ವಾಗಿ ಬಿಟ್ಟಿತು. ತಮ್ಮಗಳ ಭಯ, ಬುಡುಬುಡಿಕೆಯವರು ಹೇಳಿದ ಭವಿಷ್ಯ ನಿಜವಾಗಿದ್ದು ಎಲ್ಲರನ್ನೂ ತಲ್ಲಣಿಸಿತು.

ಸಿದ್ಧಪ್ಪ ಆ ಸಂಜೆ ಲಕ್ಕನನ್ನುನೋಡಲು ಹೋಗಿದ್ದ. ಅವನೊಂದಿಗೆ ಮಾತಾಡುತ್ತಿರಬೇಕಾದರೆ ಸಿದ್ದಪ್ಪನ ಮೈಯೆಲ್ಲಾ 'ಜಿಲ್' ಎಂದಿತಂತೆ, ಭಯಪಟ್ಟ ಅವನು ಮನೆಗೆ ಬಂದು ತಾಯಿಯೊಂದಿಗೆ ತನಗಾದ ಅನುಭವ ವನ್ನು ಹೇಳಿ, ಮೋಹಿನಿ ತನ್ನನ್ನೂ ಹಿಡಿಯಬಹುದೇ ಎಂದು ಕೇಳಿದ. ತಾಯಿ ಅವನಿಗೆ ಸಮಾಧಾನ ಹೇಳಿ, ಮನೆ ದೇವರು ಸಿದ್ಧಪ್ಪಾಜಿಗೆ ಮುಡಿಪು ಕಟ್ಟಿಟ್ಟಳು.

ಇದಾದ ಎರಡು ದಿವಸಗಳ ತರುವಾಯ, ಸಿದ್ದಪ್ಪನ ದೂರದ ಸಂಬಂಧಿ ಮುನಿಸ್ವಾಮಿಗೆ ಮಂಡ್ಯದಲ್ಲಿ ಬಸ್ ಹತ್ತಿದ್ದೇ ಹೇಗೆಹೇಗೋ ಆಗಲು ಪ್ರಾರಂಭವಾಯಿತಂತೆ. ಬಸ್ಸು ಹಳ್ಳಿಗೆ ಬಂದದ್ದೂ ಆತನಿಗೆ ಅರಿವಿಲ್ಲ. ಜ್ಞಾನವೇ ಇಲ್ಲ. ಜನ ಅವನನ್ನು ಮನೆಗೆ ಹೊತ್ತು ತಂದರು.

ಮಲಗಿ ಮುಲುಕುತ್ತಿದ್ದ. ಮಾತನಾಡುತ್ತಿರಲಿಲ್ಲ. ಲಕ್ಕನ ತರಹವೇ ಇದೂ ಕೂಡ ಮೋಹಿನಿಯ ಕಾಟವೇ ಎಂದು ಹಳ್ಳಿಗರು ನಿರ್ಧರಿಸಿದರು. ಮಂತ್ರವಾದಿಯನ್ನು ಕರೆಸಿ, ಹಳ್ಳಿಗೆ ದಿಗ್ಬಂಧನವನ್ನು ಮಾಡಿಸಿದರು.

ಮೂರು ದಿವಸಗಳ ನಂತರ ಸಿದ್ದಪ್ಪ ಹೊಲದಲ್ಲಿ ಕೆಲಸಮಾಡುತ್ತಿದ್ದಾಗ ಹೆಂಗಸರು ಬಿದ್ದ ಬಾವಿಯ ಕಡೆ ನೋಡಲೂ ಅವನಿಗೆ ಹೆದರಿಕೆ. ಒಮ್ಮೆ ಅತ್ತ ನೋಡಿದಾಗ, ಯಾರೋ ನಿಂತಂತೆ ಭಾಸವಾಯಿತು. ಬಾಯಿ ಒಣಗಿ, ನಿಲ್ಲಲ್ಲು ಸಾಧ್ಯವಿಲ್ಲ ಎನ್ನುವಂತಾಯಿತು. ಕೆಲಸ ನಿಲ್ಲಿಸಿ ಮನೆಗೆ ವಾಪಸ್ ಬಂದ. ಮನೆದೇವರು ಸಿದ್ದಪ್ಪಾಜಿಗೆ ಊದು ಕಡ್ಡಿ ಹಚ್ಚಿ 'ನನ್ನನ್ನು ಈ ಮೋಹಿನಿಗಳಿಂದ ಕಾಪಾಡು' ಎಂದು ಪ್ರಾರ್ಥಿಸಿದ, ಸ್ವಲ್ಪ ಹೊತ್ತಿನನಂತರ ಕೂಗಾಡಲು ಪ್ರಾರಂಭಿಸಿದ. ಮನೆಯವರು, ನೆರೆದವರು 'ಯಾರು ನೀನು?' ಎಂದರೆ, "ನಾನು ಹೊನ್ನಿ. ಇವನನ್ನು ನೋಡಿ ಆಸೆ ಆಯಿತು, ಬಂದೆ. ನನ್ನ ಜೊತೆಯಲ್ಲಿ ಕರೆದುಕೊಂಡು ಹೋಗುತ್ತೇನೆ" ಎಂದು ಕೇಕೆ ಹಾಕಿ ನಕ್ಕ. ಮಾರನೇ ದಿವಸ ಅವನ ಸಂಬಂಧಿ ಮಾರಕ್ಕನ ಪ್ರೇತ ಅವನ ಮೇಲೆ ಬಂತು! "ಹೊನ್ನಿ ಇವನ ಮೇಲೆ ಕಣ್ಣು ಹಾಕವಳೆ. ಕೆಟ್ಟ ಮುಂಡೆ ಅವಳು. ನಮ್ಮ ಸಿದ್ದನನ್ನು ನಾನು ಕಾಪಾಡುತ್ತೇನೆ" ಎಂದಿತು. ಅದೇ ದಿನ ಸಂಜೆ ಸಿದ್ದಪ್ಪ ಹಣೆಗೆ, ಮೈಗೆ ವಿಭೂತಿ ಬಳಿದುಕೊಂಡು ಕುಣಿಯತೊಡಗಿದ. ನೆರೆದವರಿಗೆ "ನಾನು ಸಿದ್ದಪ್ಪಾಜಿ, ನನ್ನನ್ನು ನೀವು ಉದಾಸೀನ ಮಾಡಿದ್ದೀರಿ. ಗುಡಿ ಹಾಳುಬಿದ್ದು ಹೋಗಿದೆ, ಸರಿಮಾಡಿ" ಎಂದು ಅಬ್ಬರಿಸಿದ. ಊರಿನಲ್ಲಿದ್ದ ಸಿದ್ದಪ್ಪಾಜಿ ಗುಡಿ ಜೀರ್ಣಾವಸ್ಥೆಯಲ್ಲಿದ್ದುದು ನಿಜ. ಎಲ್ಲರೂ ಅಡ್ಡ ಬಿದ್ದು "ಖಂಡಿತ ಮಾಡುತ್ತೇವೆ. ನನ್ನಪ್ಪಾ! ನಮ್ಮನ್ನು ಕಾಪಾಡು" ಎಂದು ಗಲ್ಲ ಬಡಿದು ಕೊಂಡರು. ಈ ಮೋಹಿನಿಗಳ ಪೀಡೆಯನ್ನು ನಿಲ್ಲಿಸು ಎಂದು ಪ್ರಾರ್ಥಿಸಿದರು. ಅಲ್ಲಿಂದೀಚೆಗೆ ಸಿದ್ದಪ್ಪನ ಮೇಲೆ ಈ ಎರಡು ಮೋಹಿನಿಗಳು ಮತ್ತು ದೇವರು ಬರಲಾಂಭಿಸಿದುವು. ಪೂಜೆ ಪುನಸ್ಕಾರ, ಮಂತ್ರ ತಂತ್ರಗಳೆಲ್ಲಾ ವಿಫಲವಾದ ಮೇಲೆ, ಉಪಟಳ ತಡೆಯಲಾರದೆ, ಆತನನ್ನು ಮಾನಸಿಕ ಆಸ್ಪತ್ರೆಗೆ ಕರೆತಂದರು.

ಸತ್ತ ಹೆಂಗಸರು ಮೋಹಿನಿಯರಾಗುತ್ತಾರೆ ಎಂಬ ನಂಬಿಕೆ, ಗಂಡಸರನ್ನು ಮೆಟ್ಟಿಕೊಳ್ಳುತ್ತಾರೆ ಎಂಬ ಅಂಜಿಕೆ, ಬುಡುಬುಡಿಕೆಯವರ ಭವಿಷ್ಯ, ತನ್ನ ಜಾತಿಯವರಿಬ್ಬರಿಗೆ ಮೋಹಿನಿ ಮೆಟ್ಟಿಕೊಂಡಿತು ಎಂಬ ಸಂಗತಿ, ಸಿದ್ದಪ್ಪನ ಮನಸ್ಸಿನ ಮೇಲೆ ತೀವ್ರ ಪರಿಣಾಮ ಮಾಡಿ, ತಾನೂ ಅದಕ್ಕೆ ಬಲಿಯಾಗಬಹುದೆಂಬ ಭೀತಿ, ನಿರೀಕ್ಷೆ ಹುಟ್ಟಿತು. ''ತನ್ನನ್ನು ಕಾಪಾಡಬೇಕಾದರೆ, ಮನೆ ದೇವರು ಸಿದ್ದಪ್ಪಾಜಿಗಲ್ಲದೆ ಇನ್ಯಾರಿಗೂ ಸಾಧ್ಯವಿಲ್ಲ. ಆದರೆ ಮನೆದೇವರ ಗುಡಿ ಬಿದ್ದುಹೋಗುವ ಸ್ಥಿತಿಯಲ್ಲಿದ್ದರೂ ತಾವೇನೂ ಮಾಡಿಲ್ಲ. ದೇವರಿಗೆ ಕೋಪ ಬಂದಿರಬೇಕು.'' ಈ ಗೊಂದಲದಲ್ಲಿ ಬಿದ್ದ ಅವನ ಮೇಲೆ ಹೊನ್ನಿ ಬಂದಳು. ಪ್ರಚಲಿತ ನಂಬಿಕೆಯಂತೆ ಮಾತಾಡಿದಳು. ಮಾರಕ್ಕ ಸಂಬಂಧಿಕಳಾಗಿದ್ದವಳು 'ನಾನು ನಿನ್ನನ್ನು ಕಾಪಾಡುತ್ತೇನೆ.' ಎಂದಳು ! ದೇವರು ಬಂದು ತನ್ನ ಗುಡಿಯ ದುಃಸ್ಥಿತಿಯನ್ನು, ಜನರನ್ನು ದೂರಿತು. ಸಮಾಜದ ನಂಬಿಕೆಗೆ ಅನುಸಾರವಾದ ಅವನ ನಿರೀಕ್ಷೆಯಂತೆ ಅವನು ನಡೆದುಕೊಂಡಿದ್ದ.

ಶೃಂಗೇರಿಯ ಬಳಿ ಇರುವ ತ್ಯಾವಣ ಶಾಲೆಯಲ್ಲಿ ಸುಮಾರು ಒಂದು ವರ್ಷಕ್ಕೂ ಮೇಲ್ಪಟ್ಟು ನಡೆದ 'ಗಣ ಪ್ರಕರಣ' ಕೂಡ ಈ ವಾದವನ್ನು ಇನ್ನಷ್ಟು ಪುಷ್ಟೀಕರಿಸುತ್ತದೆ. ೧೯೭೬ ರ ಉತ್ತರಾರ್ಧ. ಒಂದು ದಿನ ಬೆಳಿಗ್ಗೆ ತ್ಯಾವಣದ ಪ್ರಾಥಮಿಕ ಶಾಲೆಯ ಮಕ್ಕಳು ಶಾಲೆಯ ಮುಂದೆ ನಿಂತು ಪ್ರಾರ್ಥನೆ ಮಾಡುತ್ತಿದ್ದರು. ಲಕ್ಷ್ಮಿ ಎನ್ನುವ ಹುಡುಗಿ ಮೆಲ್ಲನೆ ನೆಲಕ್ಕೆ ಉರುಳಿಕೊಂಡಳು. ಅವಳನ್ನು ನೆರಳಿಗೆ ಸಾಗಿಸಿ, ಮುಖದ ಮೇಲೆ ನೀರು ಚಿಮುಕಿಸಿ ಶೈತ್ಯೋಪಚಾರ ಮಾಡಿದರು. ಕೆಲವು ನಿಮಿಷಗಳ ನಂತರ ಕಣ್ಣು ತೆರೆದ ಆಕೆ ''ನನಗೆ ತಲೆ ಸುತ್ತಿದಂತಾಗಿ ಕಣ್ಣು ಕತ್ತಲಿಟ್ಟಿತು. ಬಳಿಕ ನನಗೇನಾಯಿತು ಎಂಬುದು ಗೊತ್ತಿಲ್ಲ'' ಎಂದಳು. ಹೊಟ್ಟೆ ತುಂಬುವಷ್ಟು ತಿಂಡಿ ತಿನ್ನದೆ ಬಂದಿದ್ದ ಆಕೆಗೆ ಹೀಗಾಗಿರಬಹುದೆಂದು ತಿಳಿದು (ಅದು ವಾಸ್ತವಿಕ ಸಂಗತಿಯೂ ಆಗಿತ್ತು) ಮುಖ್ಯೋಪಾಧ್ಯಾಯರು ಕಾಫಿ ತಿಂಡಿ ತರಿಸಿ, ತಿನ್ನಿಸಿ, ಮನೆಗೆ ಕಳುಹಿಸಿದರು.

ಆ ಹುಡುಗಿ ಆ ರೀತಿ ಬಿದ್ದದ್ದು ಹಳ್ಳಿಯವರಿಗೆಲ್ಲಾ ಗೊತ್ತಾಯಿತು ಈ ಪ್ರದೇಶದಲ್ಲಿ ವ್ಯಾಪಕವಾಗಿರುವ ನಂಬಿಕೆಯಂತೆ ಇದು ಯಾವುದೋ

ಭೂತದ ಉಪದ್ರ ಇರಬೇಕೆಂದು ಜನ ತರ್ಕಿಸಿದರು. ಎರಡು ದಿನಗಳ ನಂತರ ಇನ್ನೊಬ್ಬ ಹುಡುಗಿ, ಅದರ ಮರುದಿನ ಮತ್ತೊಂದು ಹುಡುಗಿ ಅದೇ ರೀತಿ ಬಿದ್ದಾಗ, ಇದು ಭೂತದ ಉಪದ್ರ ಅಲ್ಲದೆ ಮತ್ತೇನೂ ಅಲ್ಲ ಎಂದು ಪ್ರಚಾರವಾಯಿತು. ಹಳ್ಳಿಗರಿಗೆಲ್ಲಾ ಇದು ಅಚ್ಚರಿಯ ವಿಚಾರ ವಾಯಿತು. ತಾವು ವಾಡಿಕೆಯಂತೆ ಪ್ರತಿವರ್ಷವೂ ದೈವ, ಗಣಗಳಿಗೆ ಪೂಜೆ, ಕಾಣಿಕೆ, ಬಲಿಗಳನ್ನು ಸಲ್ಲಿಸುತ್ತಿದ್ದೇವಲ್ಲ. ದೆಯ್ಯ ಪಿಶಾಚಿ ಪೀಡೆಗಳಿಂದ ತಮ್ಮನ್ನು ಈ ಗಣಗಳು ರಕ್ಷಿಸಬೇಕಲ್ಲ. ಎಲ್ಲಿ ಏನು ವ್ಯತ್ಯಾಸವಾಯಿತೆಂದು ಚರ್ಚಿಸಿದರು. ಕಡೆಗೆ ಹಿರಿಯರೊಬ್ಬರು ಈ ಉಪದ್ರಕ್ಕೆ ಕಾರಣವನ್ನು ಊಹಿಸಿದರು. ಹದಿನೈದು ವರ್ಷಗಳ ಹಿಂದೆ ತ್ಯಾವಣದ ಈ ಶಾಲೆಯ ಜಾಗದಲ್ಲಿ ಎರಡು ಸಮಾಧಿಗಳಿದ್ದುವು. ಆ ಎರಡು ಪ್ರೇತಗಳು ತಮ್ಮ ಜಾಗದಲ್ಲಿ ಶಾಲೆಯನ್ನು ಕಟ್ಟಿದ್ದಕ್ಕೆ ಕೋಪಗೊಂಡು ಈಗ ಮಕ್ಕಳನ್ನು ಕಾಡುತ್ತಿವೆ ಎಂದು ತರ್ಕಿಸಿದರು. ಕೋಪವಿದ್ದರೆ ಈ ಹದಿನೈದು ವರ್ಷಗಳ ಕಾಲ ಏಕೆ ಸುಮ್ಮನಿದ್ದುವು ಎಂದು ಯಾರೂ ಕೇಳಲಿಲ್ಲ. ಪ್ರಾರ್ಥನೆ ಸಮಯದಲ್ಲಿ ಜನ ಸೇರಿದರು. ಹುಡುಗಿಯರು ಬಿದ್ದಾಗ, ಯಾರು ನೀನು, ಏಕೆ ಬಂದೆ, ನಿನಗೇನು ಬೇಕು ಎಂದು ಕೇಳಿದರು. ಹುಡುಗಿಯರಲ್ಲಿ ಇಬ್ಬರು, "ನಾವು ಶಕ್ತಿ ದೇವತೆಗಳು.ನಮ್ಮ ಹೆಸರು 'ಕಾಂತಿಬಲೆ' 'ಬಲೇವತಿ'. ನಮಗೆ ತಿನ್ನಲು ಕೊಡಿ" ಎಂದರು, ಕಾಂತಿಬಲೆ, ಬಲೇವತಿ ಹೆಸರುಗಳನ್ನು ಹಳ್ಳಿಗರು ಕೇಳಿದ್ದು ಇದೇ ಮೊದಲು. ಅವರಿಗೆ ಗೊತ್ತಿದ್ದ ಭೂತಗಣ, ದೇವತೆಗಳೆಂದರೆ, ವೀರಭದ್ರ, ಒಂಟಿ, ಭೂತರಾಯ, ಪಂಜುರ್ಲಿ, ಕೆಂಚುಟಿಕ ಇತ್ಯಾದಿ. ಹೊಸದೇವತೆ ನಿಜವಿರಬಹುದೇ ಅಥವಾ ಘಾಟಿ ದೆವ್ವಗಳು ನಾಟಕ ಮಾಡುತ್ತಿವೆಯೇ ಎಂದು ನಿರ್ಧರಿಸಲಾಗದ ಜನ, ಒಂದೆಡೆ ಹುಡುಗಿಯರು ಕೇಳಿದ ತಿಂಡಿ ಪದಾರ್ಥಗಳನ್ನು ಕೊಟ್ಟರೆ, ಇನ್ನೊಂದೆಡೆ ದೆವ್ವಗಳ ಉಚ್ಚಾಟನೆಗೆ ನಾನಾ ಕ್ರಮಗಳನ್ನು ಕೈಗೊಂಡರು. ಕ್ರಮೇಣ ಈ ರೀತಿ ಬೀಳುವವರ ಸಂಖ್ಯೆ ೨೫ ಕ್ಕೆ ಮುಟ್ಟಿತು. ದಿನಕ್ಕೆ ಸರಾಸರಿ ನಾಲ್ಕೈದು ಹುಡುಗ ಹುಡುಗಿಯರು ಬೀಳುವುದು, ಅವರಲ್ಲಿ ಒಬ್ಬಿಬ್ಬರು ವಿಚಿತ್ರವಾಗಿ ಆಡುವುದು, ಹೊಟ್ಟೆ ಬಡಿದುಕೊಂಡು ನಮಗೆ ತಿನ್ನಲು ಕೊಡಿ ಎನ್ನುವುದು, ಕೊಟ್ಟರೆ ಗಬಗಬನೆ ತಿನ್ನುವುದು,

ಯಾರಾದರೂ ಯಾರು ನೀನು ಎಂದರೆ "ನಾನು ಕಾಂತಿಬಲೆ, ನೋಡಿ ಆ ಹಲಸಿನ ಮರದಲ್ಲಿ ನನ್ನ ವಾಸ" ಎನ್ನುವುದೂ ನಡೆಯಲಾರಂಭಿಸಿತು. ಕೆಲವು ದಿವಸ ಈ ಸ್ಥಿತಿಯಲ್ಲಿದ್ದ ಒಂದೆರಡು ಹುಡುಗಿಯರು ಶಾಲೆಯಲ್ಲಿ ಅಷ್ಟು ಜನಪ್ರಿಯಳಾಗಿಲ್ಲದಿದ್ದ ಉಪಾಧ್ಯಾಯಿನಿಯ ಮೇಲೆ ಏರಿ ಹೋದರು. ಆಕೆಯ ಸರವನ್ನು ಕಿತ್ತು "ಹೋಗೆ, ಇಲ್ಲಿಂದ ಹೊರಡು, ಮತ್ತೆ ಕಾಲಿಟ್ಟೀಯಾ" ಎಂದು ಬೆದರಿಸಿದ್ದೂ ಆಯಿತು. ಸುತ್ತಮುತ್ತಲಿನ ಮಂತ್ರವಾದಿಗಳು, ಗಣಮಕ್ಕಳು, ತಮ್ಮ ಕಲಿತ ವಿದ್ಯೆಯನ್ನೆಲ್ಲಾ ಖರ್ಚು ಮಾಡಿದರು. ಆದರೆ ಈ ಉಪದ್ರ ನಿಲ್ಲಲಿಲ್ಲ. ಕಡೆಗೆ ಶೃಂಗೇರಿ ಸ್ವಾಮಿಗಳು ಶಾಲೆಯಲ್ಲಿ ವಿಶೇಷ ಯಜ್ಞವನ್ನು ಮಾಡಿದರು. ಅವರ ಎದುರಿನಲ್ಲೇ ಮಕ್ಕಳು ಸ್ಮೃತಿ ತಪ್ಪಿ ಬಿದ್ದರು. ಶಾಲೆಯಲ್ಲಿ ಮಾತ್ರ ಈ ರೀತಿ ಆಗುತ್ತಿದ್ದುದರಿಂದ, ಕೆಲವು ತಂದೆ ತಾಯಿಗಳು ತಮ್ಮ ಮಕ್ಕಳನ್ನು ಈ ಶಾಲೆಗೆ ಕಳುಹಿಸುವುದನ್ನು ನಿಲ್ಲಿಸಿದರು. ಇದರಿಂದ ವ್ಯಾಕುಲಗೊಂಡ ಶಾಲೆಯ ಮುಖ್ಯೋಪಾಧ್ಯಾಯರು ಪ್ರಜಾವಾಣಿ, ಉದಯವಾಣಿ ದಿನ ಪತ್ರಿಕೆಗಳಲ್ಲಿ ಈ ಪ್ರಕರಣಗಳ ವೈಜ್ಞಾನಿಕ ವಿಶ್ಲೇಷಣೆ ಮತ್ತು ನೆರವಿಗಾಗಿ ಪತ್ರ ಬರೆದರು. ಇದು ರಾಜ್ಯ ಆರೋಗ್ಯ ಇಲಾಖೆಯ ಗಮನಕ್ಕೆ ಬಂದು, ಈ ಪ್ರಕರಣದ ಅಧ್ಯಯನ ನಡೆಸಲು ಮತ್ತು ತೊಂದರೆಗೀಡಾದ ಮಕ್ಕಳಿಗೆ ಸೂಕ್ತ ನೆರವನ್ನು ನೀಡಲು ಬೆಂಗಳೂರಿನ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರ ವಿಜ್ಞಾನ ಸಂಸ್ಥೆಯನ್ನು ಕೇಳಿಕೊಂಡಿತು. ಮನೋವೈದ್ಯರು ಹಾಗೂ ಮನಶಾಸ್ತ್ರಜ್ಞರ ಒಂದು ತಂಡ (ಡಾ॥ ವಿ. ವೆಂಕಟರಾಮಯ್ಯ, ಡಾ॥ ಸಿ. ಆರ್. ಚಂದ್ರಶೇಖರ್, ಡಾ॥ ಎಂ. ಮಲ್ಲಿಕಾರ್ಜುನಯ್ಯ ಮತ್ತು ಶ್ರೀ ಸಿ. ಕೆ. ವಾಸುದೇವರಾವ್) ಈ ಶಾಲೆಯ ತೊಂದರೆಗೀಡಾದ ಮಕ್ಕಳು, ಅವರ ತಂದೆ ತಾಯಿಗಳು, ಉಪಾಧ್ಯಾಯರು, ಮುಂತಾದ ಸಂಬಂಧಪಟ್ಟವರನ್ನು ಸಂದರ್ಶಿಸಿ ಅಧ್ಯಯನ ನಡೆಸಿದಾಗ ಆಸಕ್ತಿ ಕೆರಳಿಸುವ ಸಂಗತಿಗಳು ಹೊರಬಿದ್ದುವು.

ಮೈಮೇಲೆ ಶಕ್ತಿ ದೇವತೆ ಬರುತ್ತದೆ ಎನ್ನಲಾದ ೨೫ ಮಕ್ಕಳಲ್ಲಿ ಐದಾರು ಮಂದಿಗೆ ಇನ್ನೂ ಈ 'ತೊಂದರೆ' ಇತ್ತು. "ಎಲ್ಲಿ ನಿಮ್ಮ ಮೇಲೆ ದೇವತೆ ಬರುವುದನ್ನು ನಾವು ನೋಡಬೇಕಲ್ಲ. ಅದನ್ನೇ

ಯೋಚಿಸುತ್ತಾ ಇರಿ. ಬಂದೇ ಬಿಡುತ್ತದೆ" ಎಂದು ಮನಸ್ಸಿಗೆ ಸೂಚನೆ ಕೊಡುವುದೇ ತಡ, ಮೆಲ್ಲನೆ ನೆಲದ ಮೇಲೆ ಉರುಳಿಕೊಂಡರು. ತಂಡದವರೆದುರು ತಮ್ಮ ವಿಶೇಷ ವರ್ತನೆಯನ್ನು ಪ್ರದರ್ಶಿಸಿದರು. ಅವರನ್ನು ಸುಪ್ತಸ್ಥಿತಿಗೊಯ್ದು ಪ್ರಶ್ನಿಸಿದಾಗ, ಇಬ್ಬರು ಹುಡುಗಿಯರು ಪ್ರಾರಂಭದಲ್ಲಿ ಸಂಕೋಚಪಟ್ಟರೂ ಅನಂತರ ನೇರವಾಗಿ ಹೇಳಿಬಿಟ್ಟರು, "ನಾವು ಇದನ್ನು ತಮಾಷೆಗಾಗಿ ಮಾಡಿದೆವು ! ಬಿದ್ದಾಗ 'ನೀವು ಯಾರು ? ಏನು ಬೇಕು ?' ಎಂದು ಜನ ನಮ್ಮನ್ನು ಪೀಡಿಸಿದರು. ನಾವು ಬೇಕೆಂತಲೇ ನಾವು ಶಕ್ತಿ ದೇವತೆಗಳು" ಎಂದೆವು. "ಹೆಸರೇನು ಎಂದಾಗ ಬಾಯಿಗೆ ಬಂದ ಒಂದೆರಡು ಹೆಸರು ಹೇಳಿದೆವು. 'ಬಲೇವತಿ, ಕಾಂತಿಬಲೆ' ಎಂದೆವು. ನಾವು ಕೇಳಿದ ತಿಂಡಿ ತಿನ್ನಲು ಸಿಗುತ್ತಿತ್ತು, ಮಜವಾಗಿತ್ತು" ಎಂದರು. ಉಳಿದವರಲ್ಲಿ ಕೆಲವರು, "ಲಕ್ಷ್ಮಿ ಮತ್ತಿತರಿಗೆ ಈ ರೀತಿ ಆಗಿ ಬೀಳುವುದನ್ನು, ಆಗ ಅವರಿಗೆ ತಿನ್ನಲು ತಿಂಡಿ ಸಿಗುವುದನ್ನು ಕಂಡು, ನಮಗೂ ಇದು ಆಗಬಾರದೇ ಎನಿಸುತ್ತಿತ್ತು" ಎಂದರೆ, ಇನ್ನು ಕೆಲವರು "ಅವರನ್ನು ನೋಡಿ ನಮಗೆ ಭಯವಾಗುತ್ತಿತ್ತು. ನಮಗೂ ಆಗಬಹುದೇನೋ ಎಂದು ಅನಿಸುತ್ತಿತ್ತು" ಎಂದರು ! ಈ ಎಲ್ಲ ಮಕ್ಕಳೂ ತಮ್ಮ ತಮ್ಮ ಹಳ್ಳಿಗಳಲ್ಲಿ ದೊಡ್ಡವರ ಮೇಲೆ ದೈವ, ಭೂತಗಣಗಳು ಬರುವುದನ್ನು ನೋಡಿದ್ದರು. ಹನ್ನೆರಡು ಮಕ್ಕಳ ಮನೆಯಲ್ಲಿ, ಮನೆಯ ಒಬ್ಬರ ಮೇಲೆ ದೇವರು, ದೆವ್ವ ಬರುತ್ತಿದ್ದುದು ಗಮನಾರ್ಹ ಅಂಶವಾಗಿತ್ತು. ಹೀಗೆ ದೊಡ್ಡವರನ್ನು ನೋಡಿ, ಈ ಮಕ್ಕಳೂ ಅದೇ ವರ್ತನೆಯನ್ನು ಪ್ರಕಟಿಸಿದ್ದುದು ಸ್ಪಷ್ಟವಾಗಿ ಗೋಚರವಾಯಿತು. ಇನ್ನೂ ಆವೇಶ ಬರುತ್ತಿದ್ದ ಹುಡುಗಿಯರಿಗೆ ಈ ವರ್ತನೆಯನ್ನು ನಿಲ್ಲಿಸುವಂತೆ ಸುಪ್ತಾವಸ್ಥೆಯಲ್ಲಿ ಬಲವಾದ ಸೂಚನೆ ನೀಡಲಾಯತು. ಉಳಿದವರಿಗೆ ನೇರವಾಗಿ, ಸರಳ ಮಾತುಗಳಲ್ಲಿ, ಹೇಗೆ ಅವರು ಭಯ ಪಟ್ಟದ್ದರಿಂದ, ತಮಗೂ ಆಗಬಹುದೆಂದು ನಿರೀಕ್ಷೆ ಮಾಡಿದ್ದರಿಂದ, ಆವೇಶ ಬಂದಿತು ಎದು ವಿವರಿಸಿ ಧೈರ್ಯ ನೀಡಲಾಯಿತು. ಇದಾಗಿ ಈಗಾಗಲೇ ಎರಡು ವರ್ಷಗಳಾಗಿವೆ. ಈ ಶಾಲೆಯ ಮಕ್ಕಳಲ್ಲಿ ಯಾರಿಗೂ ಮತ್ತೆ ಆವೇಶ ಬಂದಿಲ್ಲ. ಚೆನ್ನಾಗಿ ಓದಿಕೊಂಡು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಮಂತ್ರ ತಂತ್ರ, ಪೂಜೆ, ಯಜ್ಞಗಳು ಸಾಧಿಸದಿದ್ದನ್ನು, ಮನೋವೈಜ್ಞಾನಿಕ ವಿವರಣೆ ಮತ್ತು ಚಿಕಿತ್ಸೆ ಸಾಧಿಸಿತು.

ಮಕ್ಕಳಲ್ಲಿ ಸಾಮೂಹಿಕವಾಗಿ ಈ ವಿದ್ಯಮಾನ ಕಾಣಬೇಕಾದರೆ, ಪರಿಸರದಲ್ಲಿ ಈ ಬಗ್ಗೆ ಸಾಕಷ್ಟು ನಂಬಿಕೆ ಹಾಗೂ ದೊಡ್ಡವರ ಮೇಲೆ ದೇವರು, ಭೂತ ಬರುವ ಪ್ರಕರಣಗಳು ಸಾಕಷ್ಟಿರಬೇಕೆಂದು ಊಹಿಸಿದ ಅಧ್ಯಯನ ತಂಡ, ಈ ಪ್ರದೇಶದಲ್ಲಿ ಮನೆ ಮನೆಗೆ ಹೋಗಿ ಎಷ್ಟು ಜನರ ಮೇಲೆ ಈ ಆವೇಶ ಬರುತ್ತದೆ ಹಾಗೂ ಜನ ಎಷ್ಟರ ಮಟ್ಟಿಗೆ ಇದರಲ್ಲಿ ನಂಬಿಕೆ ಇಟ್ಟಿದ್ದಾರೆ, ಅವರ ದೃಷ್ಟಿ ಕೋನವೇನು ಎಂದು ತಿಳಿಯಲು ವಿವರವಾದ ಅಧ್ಯಯನವನ್ನು ನಡೆಸಿತು. ಮೂವತ್ತು ಹಳ್ಳಿಗಳಲ್ಲಿ ವಾಸಿಸುತ್ತಿದ್ದ 182 ಕುಟುಂಬಗಳಿಗೆ ಭೇಟಿ ನೀಡಿ, ಪ್ರತಿ ಕುಟುಂಬದ ಮುಖ್ಯ ವ್ಯಕ್ತಿಯಿಂದ ಪ್ರಶ್ನಾವಳಿಯ ಮೂಲಕ 1158 ಜನರ ಬಗ್ಗೆ ಮಾಹಿತಿ ಸಂಗ್ರಹಿಸಲಾಯಿತು. ಪ್ರತಿ ನೂರು ಜನಕ್ಕೆ ಇಬ್ಬರ ಮೈಮೇಲೆ ದೇವರೋ, ಭೂತವೋ ಬರುತ್ತಿದ್ದುದು ಕಂಡು ಬಂದಿತು. ಇವರಲ್ಲಿ ಹೆಂಗಸರೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಜನಸಂಖ್ಯೆಯ ಪ್ರತಿ ಐದನೇ ವ್ಯಕ್ತಿಗೆ 'ನಂಬಿಕೆ ಹಾಗೂ ದೃಷ್ಟಿ ಕೋನ'ದ ಬಗ್ಗೆ ಪ್ರಶ್ನೆಗಳನ್ನು ಕೇಳಿದಾಗ ಸ್ವಾರಸ್ಯಕರ ಉತ್ತರಗಳು ಬಂದುವು. ಪ್ರಶ್ನೆಗಳಿಗೆ ಉತ್ತರಿಸಿದ ೧೪೪ ಜನರ ಪೈಕಿ ಸೇಕಡ ೬೦ ರಷ್ಟು ಮಂದಿ ತಮಗೆ ದೈವ, ದೆವ್ವ ಮೈಮೇಲೆ ಬರುವುದರಲ್ಲಿ ನಂಬಿಕೆ ಇದೆ ಎಂದರು. ಹೆಂಗಸರಲ್ಲಿ ಈ ನಂಬಿಕೆ ತೀವ್ರವಾಗಿತ್ತು. ನಮಗೆ ಇದರಲ್ಲಿ ನಂಬಿಕೆ ಇಲ್ಲ ಎಂದವರು ಸೇಕಡ ಹತ್ತು ಮಂದಿ ಮಾತ್ರ. ಬಹುಪಾಲು ಜನ ಮನುಷ್ಯನ ಮೇಲೆ ದೇವರು ಬರುವುದು ಸಹಾಯಕಾರಿಯಾದುದರಿಂದ ತಾವು ಅದನ್ನು ಸ್ವಾಗತಿಸುವುದಾಗಿ ಹೇಳಿದರು ; ದೆವ್ವ ಬರುವುದು ಒಂದು ಅನಿಷ್ಟ ಪೀಡೆ, ಅದು ಬರುವುದು ಬೇಡ ಎಂದರು. ದೇವರು, ದೆವ್ವ ಬರುವುದರ ಮೇಲೆ ಮನುಷ್ಯನ ಹತೋಟಿ ಇಲ್ಲವೆಂದರು. ಈ ಪ್ರದೇಶಗಳಲ್ಲಿ ತಮ್ಮ ಮೇಲೆ ದೇವರು, ಗಣ ಬರಿಸಿಕೊಳ್ಳುವ ಗಣ ಮಕ್ಕಳು, ಅರ್ಚಕರು ಬಹಳ ಜನಪ್ರಿಯರಾಗಿರುವುದೂ ಜನ ತಮ್ಮ ಯಾವುದೇ ಕಷ್ಟ ಕಾಯಿಲೆಗಳಿಗೆ ಇವರ ಮೊರೆ ಹೊಗುವುದೂ ಈ ಹಿನ್ನೆಲೆಯಲ್ಲಿ ಆಶ್ಚರ್ಯವೆನಿಸುವುದಿಲ್ಲ.

ಯಾವುದೇ ಸಮಾಜದಲ್ಲಿ ಈ ನಂಬಿಕೆಗಳು ಎಷ್ಟರಮಟ್ಟಿಗೆ ಬೇರೂರಿವೆ, ಜನಜೀವನದಲ್ಲಿ ಹೇಗೆ ಹಾಸು ಹೊಕ್ಕಾಗಿವೆ ಎಂಬುದನ್ನು

ಅವಲಂಬಿಸಿದೆ, ಮೈಮೇಲೆ ದೇವರು, ದೆವ್ವ ಬರುವ ಪ್ರಕರಣಗಳ ಸಂಖ್ಯೆ, ಇದನ್ನು ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಸಾಕ್ಷ್ಯಾಧಾರ ಗಳಿಂದ ತೋರಿಸಿದ್ದಾರೆ. ವೈಜ್ಞಾನಿಕ ತಿಳಿವಳಿಕೆ, ಆಲೋಚನೆ ಹೆಚ್ಚಿದಂತೆ, ಈ ವಿದ್ಯಮಾನದಲ್ಲಿ ನಂಬಿಕೆ ಕಡಿಮೆಯಾದಂತೆ ಈ ಪ್ರಕರಣ ಗಳೂ ಕಡಿಮೆಯಾಗಿ ಹೋಗುವುದು ಕಂಡು ಬಂದಿರುವುದು ಗಮನಾರ್ಹ. ಉದಾಹರಣೆಗೆ, ಇಂಗ್ಲೆಂಡ್ ದೇಶವನ್ನೇ ತೆಗೆದುಕೊಳ್ಳೋಣ. ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದಲ್ಲಿ ದೇವರು ಬರುವವರ, ದೆವ್ವ ಹಿಡಿದವರ ಸಂಖ್ಯೆ ಅಪರಿಮಿತವಾಗಿತ್ತು, ಆದರೆ ಇಂದು ಇಲ್ಲವೇ ಇಲ್ಲ ಎನ್ನುವಷ್ಟು ಅಪರೂಪ. ನಮ್ಮ ಪಟ್ಟಣ ಪ್ರದೇಶಗಳಲ್ಲಿ ಈ ಬದಲಾವಣೆಯನ್ನು ನಾವು ಕಾಣುತ್ತೇವೆ. ವಿದ್ಯಾವಂತರು, ಮೂಢನಂಬಿಕೆ ಗಳಲ್ಲಿ ವಿಶ್ವಾಸವಿಲ್ಲದವರು, ವೈಜ್ಞಾನಿಕವಾಗಿ ಆಲೋಚಿಸಬಲ್ಲವರು ಇರುವಂತಹ ಬಡಾವಣೆ, ಕೇರಿಗಳಲ್ಲಿ ದೈವ, ದೆವ್ವ ಬರುವ ಸಂಗತಿ ಕಂಡು ಬರುವುದಿಲ್ಲ.

## ಮಾನಸಿಕ ವಿವರಣೆ

ಕೆಲವರು ತಾವು ನೇರವಾಗಿ ಹೇಳಬೇಕಾದ್ದನ್ನು ಧೈರ್ಯವಾಗಿ ಪ್ರಕಟಿಸಿ, ವಿಚಾರದ ಕರ್ತೃ ತಾವೆಂದು ಒಪ್ಪಿಕೊಳ್ಳಲು ಸಿದ್ಧರಿಲ್ಲದಿದ್ದಾಗ ಹೇಳಬೇಕಾದದ್ದನ್ನು ಪರೋಕ್ಷವಾಗಿ ದೈವ, ದೆವ್ವ ಬರುವ ಪ್ರಕರಣದ ಅವಧಿಯಲ್ಲಿ ವ್ಯಕ್ತಪಡಿಸುತ್ತಾರೆ. ಹೀಗಾಗಿ ಇದು ಒಂದು ಬಗೆಯ ಸಂಪರ್ಕ ಮಾಧ್ಯಮ ಎಂದು ಮನೋವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ. ಆರಂಭದಲ್ಲಿ ಹೇಳಿದ ಹನುಮಕ್ಕನ ಪ್ರಕರಣ ಈ ಬಗೆಯದು. ಕುಡುಕ ಗಂಡನ ವಿರುದ್ಧ ಪ್ರತಿಭಟಿಸಲು ಧೈರ್ಯವಿಲ್ಲದ ಆಕೆ, ಸವತಿಯ ದೆವ್ವವನ್ನು ಮೈಮೇಲೆ ಬರಿಸಿಕೊಂಡು, ಗಂಡನನ್ನೂ ಬೈದು ಹೊಡೆದು ಪ್ರತಿಭಟಿಸಿದಳು. ಇದರಿಂದ ಆಕೆಯ ಗಂಡ ಸರಿಹೋಗುವನೋ ಇಲ್ಲವೋ ಎಂಬುದು ಬೇರೆ ವಿಷಯ. ಇದರಿಂದ ಅವಳಿಗೆ ತನ್ನ ಅಸಮಾಧಾನವನ್ನೂ ಕೋಪವನ್ನೂ ಪ್ರಕಟಿಸಿದ ತೃಪ್ತಿ ಸಿಕ್ಕಿತ್ತು.

ಇದೇ ಬಗೆಯ ಇನ್ನೊಂದು ಉಧಾಹರಣೆ ಕಮಲಮ್ಮನದು.

ಶೃಂಗೇರಿಯಲ್ಲಿ ಮನೆ ಮನೆಗೆ ಹೋಗಿ ಅಧ್ಯಯನ ನಡೆಸಿದಾಗ ಕಮಲಮ್ಮನ ಮೇಲೆ ಅವಳ ತಾಯಿಯ ದೆವ್ವಬರುತ್ತದೆ ಎಂದು ಹೇಳಲಾಯಿತು. ಕಳೆದ ಹತ್ತು ವರ್ಷಗಳಿಂದ ವರ್ಷಕ್ಕೆ ಕನಿಷ್ಠ ಎರಡು ಸಾರಿ ಆದರೂ ಕಾಣಿಸಿ ಕೊಳ್ಳುತ್ತದೆ ಎಂದು ಹೇಳಿದರು. "ಬಂದಾಗ ಅದು ಏನು ಮಾಡುತ್ತದೆ? ಏನು ಹೇಳುತ್ತದೆ ?" ಎಂದೆವು. ಬಂದಾಗಲೆಲ್ಲ ತನ್ನ ಮಗಳನ್ನು ಸರಿಯಾಗಿ ನೋಡಿಕೊಳ್ಳುವಂತೆ ಅಳಿಯನಿಗೆ ತಾಕೀತು ಮಾಡುತ್ತದೆ. ಮೊಮ್ಮಕ್ಕಳನ್ನು ಕರೆದು ಮೈದಡವುತ್ತದೆ ಎಂದರು. "ಏಕೆ ? ಕಮಲಮ್ಮ ನನ್ನು ಆಕೆಯ ಗಂಡ ಸರಿಯಾಗಿ ನೋಡಿಕೊಳ್ಳುವುದಿಲ್ಲವೇ" ಎಂದು ವಿಚಾರಿಸಿದೆವು. ಮೊದಲು ಹೇಳಲು ಮನೆಯವರು ಸಂಕೋಚಪಟ್ಟರೂ ಅನಂತರ ವಿವರಗಳನ್ನು ಕೊಟ್ಟರು. ಪ್ರಾರಂಭದಲ್ಲಿ ಕಮಲಮ್ಮನಿಗೆ ಆಕೆಯ ಗಂಡ ಕಾಟ ಕೊಡುತ್ತಿದ್ದನಂತೆ. ಒಂದು ದಿನ ತಾಯಿಯ ತಿಥಿ ದಿವಸ, ಆಕೆಯ ಮೈಮೇಲೆ ತಾಯಿಯ ದೆವ್ವ ಬಂದು ಭಾರಿ ಗಲಾಟೆ ಮಾಡಿತಂತೆ. ತನ್ನ ಮಗಳನ್ನು ಗೋಳಾಡಿಸುತ್ತಿದ್ದ ಅಳಿಯನನ್ನು ತರಾಟೆಗೆ ತೆಗೆದುಕೊಂಡಿತಂತೆ. ಅಲ್ಲಿಂದೀಚೆಗೆ ಕಮಲಮ್ಮನ ಗಂಡ ಸ್ವಲ್ಪ ಮೆತುವಾಗಿ, ಹೆಂಡತಿಯನ್ನು ವಿನಾಕಾರಣ ದಂಡಿಸುವುದನ್ನು ನಿಲ್ಲಿಸಿದನಂತೆ. ಹೀಗೆ ಕಮಲಮ್ಮ ತನ್ನ ಅಳಲನ್ನು ಈ ರೀತಿ ವ್ಯಕ್ತಪಡಿಸಿ ಕಷ್ಟದಿಂದ ಪಾರಾಗಿದ್ದಳು.

ಹಾಗಾದರೆ ಇದು ವ್ಯಕ್ತಿ ಇಷ್ಟಪಟ್ಟು ಪ್ರಜ್ಞಾಪೂರ್ವಕವಾಗಿ ನಡೆಸುವ ಚಟುವಟಿಕೆಯೇ, ಬೇಕೆಂತಲೇ ಆಡುವ ನಾಟಕವೇ ಎಂದು ನೀವು ಕೇಳಬಹುದು. ಈ ಕ್ರಿಯೆ ಪ್ರಜ್ಞಾಪೂರ್ವಕವಾಗಿ ನಡೆಯುವುದಿಲ್ಲ. ಸ್ವಾರಸ್ಯ ಇರುವುದು ಅಲ್ಲೇ. ವ್ಯಕ್ತಿಗೆ ಅರಿವಿಲ್ಲದಂತೆ ಈ ಕ್ರಿಯೆ ಹೇಗೆ ನಡೆಯುತ್ತದೆ ನೋಡೋಣ.

ಪ್ರಖ್ಯಾತ ಮನೋವಿಜ್ಞಾನಿ ಸಿಗ್ಮಂಡ್ ಫ್ರಾಯ್ಡ್‌ನ ಹೆಸರನ್ನು ನೀವು ಕೇಳಿರುತ್ತೀರಿ. ಹಲವಾರು ವರ್ಷಗಳ ಅಧ್ಯಯನ, ಚಿಂತನ ಮತ್ತು ಆಲೋಚನೆಯಿಂದ ಆತ ನಮ್ಮ ಮನಸ್ಸು ಎರಡು ಭಾಗಗಳಿಂದ ಕೂಡಿದೆ ಎಂದು ತೀರ್ಮಾನಿಸಿದ್ದಾನೆ. ಜಾಗೃತ ಮನಸ್ಸು ಒಂದು. ಇದರಲ್ಲಿ ನಡೆಯುವ ಎಲ್ಲ ಚಟುವಟಿಕೆಗಳೂ ನಮಗೆ ಗೊತ್ತಾಗುವುದಲ್ಲದೆ ಅವು

ನಮ್ಮ ಹತೋಟಿಯಲ್ಲಿರುತ್ತವೆ. ಇನ್ನೊಂದು ಸುಪ್ತಮನಸ್ಸು. ಅವರಲ್ಲಿ ನಡೆಯುವ ಚಟುವಟಿಕೆಗಳು ನಮಗೆ ಗೊತ್ತಾಗುವುದಿಲ್ಲ. ಮನಸ್ಸಿನ ಬಹು ದೊಡ್ಡ ಭಾಗವನ್ನು ಆಕ್ರಮಿಸುವ ಇದು ನಮ್ಮ ಹತೋಟಿಯಲ್ಲಿ ಇಲ್ಲ. ನಮಗೆ ಬೇಸರವನ್ನುಂಟುಮಾಡುವ, ಆತಂಕವನ್ನುಟುಮಾಡುವ ನೈತಿಕವಾಗಿ, ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ಸಮ್ಮತವಾಗದ ನಮ್ಮ ಆಸೆ ಆಕಾಂಕ್ಷೆಗಳನ್ನು ನಾವು ಸುಪ್ತಮನಸ್ಸಿನ ಹಗೇವುಗಳಲ್ಲಿ ಬಚ್ಚಿಡುತ್ತೇವೆ. ಹೀಗೆ ನಮ್ಮ ಮನಸ್ಸು ಒಂದು ಸರೋವರವಿದ್ದ ಹಾಗೆ. ಮೇಲಿನ ಸ್ತರಗಳಲ್ಲಿ ನೀರು ಪಾರದರ್ಶಕವಾಗಿರುತ್ತದೆ. ಆ ಭಾಗ ದಲ್ಲಿರುವ ವಸ್ತುಗಳೆಲ್ಲ ಕಣ್ಣಿಗೆ ಗೋಚರವಾಗುತ್ತದೆ. ಆದರೆ ಆಳಕ್ಕೆ ಹೋದಂತೆಲ್ಲಾ ನೀರು ಬಗ್ಗಡವಾಗಿ ವಸ್ತುಗಳು ಮಸುಕಾಗಿ ಅಗೋಚರ ವಾಗುತ್ತವೆ. ಕೊನೆಗೆ ತಳದಲ್ಲಿ ಕೆಸರು ತುಂಬಿರುತ್ತದೆ. ಈ ಕೆಸರಿನಲ್ಲಿ ಏನೇನು ಹೂತು ಹೋಗಿದೆಯೋ ಗೊತ್ತಾಗುವುದಿಲ್ಲ. ಉದ್ದ ಕೋಲನ್ನು ಉಪಯೋಗಿಸಿ ಕೆದಕಿದಾಗ ಅಥವಾ ಆಳಕ್ಕೆ ಕಲ್ಲು ಒಗೆದಾಗ, ಯಾವ ಬಗೆಯ ವಸ್ತು ಮೇಲಕ್ಕೆ ಬರುವುದೋ ಹೇಳುವುದಕ್ಕಾಗುವುದಿಲ್ಲ. ಹಾಗೆಯೇ ಕಷ್ಟನಷ್ಟಗಳಿಗೆ ನಾವು ತುತ್ತಾದಾಗ, ನೋವು ನಿರಾಶೆಯ ಕೋಲು ನಮ್ಮ ಮನಸ್ಸನ್ನು ಮೀಟಿದಾಗ, ಪರಿಹಾರ ಕಾಣದ ಸಮಸ್ಯೆಯ ಕಲ್ಲು ಬಿದ್ದಾಗ, ಸುಪ್ತ ಮನಸ್ಸಿನಲ್ಲಿ ಹುದುಗಿರುವ ವಿಷಯಗಳು ಬದಲಾದ ರೂಪದಲ್ಲಿ ಹೊರಬರುತ್ತವೆ. ಪರಿಸ್ಥಿತಿಯನ್ನು ಎದುರಿಸಲು ಜಾಗೃತ ಮನಸ್ಸು ವಿಫಲವಾದಾಗ ಅದು ಹಿಂದೆ ಸರಿದು, ಸುಪ್ತ ಮನಸ್ಸು ಚಾಲಕನ ಸ್ಥಾನಕ್ಕೆ ಬರುತ್ತದೆ. ತನ್ನದೇ ಆದ ರೀತಿಯಲ್ಲಿ ಪರಿಸ್ಥಿತಿಯನ್ನು ಎದುರಿಸಲು, ಶರೀರದ ಹಾಗೂ ಬುದ್ಧಿಯ ಸಕಲ ಸಾಮರ್ಥ್ಯಗಳನ್ನು, ಚಾತುರ್ಯಗಳನ್ನು ಬಳಸಿಕೊಳ್ಳುತ್ತದೆ.ಆಗ ನಡೆಯುವ ವಿದ್ಯಮಾನಗಳು ಜಾಗೃತ ಮನಸ್ಸಿನ ಅರಿವಿಗೆ ಬರುವುದಿಲ್ಲ. ದೇವರು-ದೆವ್ವ ಬರುವುದು ಇಂತಹ ಒಂದು ಸುಪ್ತ ಮನಸ್ಸಿನ ಚಟುವಟಿಕೆ.

ಹೀಗೆ ದೈವ, ದೆವ್ವ ಮೈಮೇಲೆ ಬರುವುದು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಜನ ಸಮ್ಮತವಾದ ವಿಶೇಷ ನಡೆವಳಿಕೆ. ಇದನ್ನು ಸುಪ್ತ ಮನಸ್ಸು ಉಪಯೋಗಿಸಿಕೊಂಡು ತನ್ನ ಸಮಸ್ಯೆಗೆ ಪರಿಹಾರ ಮಾರ್ಗ ವನ್ನು ಹುಡುಕುತ್ತದೆ. ಎಷ್ಟೋ ಸಾರಿ ಸಫಲವಾಗುತ್ತದೆ.

**ಅತಿಮಾನುಷ ಕಾರ್ಯ, ಚಟುವಟಿಕೆಗಳು ಹೇಗೆ ಸಾಧ್ಯ ?**

ದೇವರು, ದೆವ್ವ ಮೈಮೇಲೆ ಬಂದಾಗ ಕೆಲವರು ಸಾಮಾನ್ಯ ಮನುಷ್ಯರ್ಯಾರೂ ಮಾಡಲಾಗದಂತಹ ಕೆಲಸ ಕಾರ್ಯಗಳನ್ನು ಮಾಡಿ ತೋರಿಸುತ್ತಾರೆ. ಅಪರೂಪಕ್ಕೆ ಅತಿ ಮಾನುಷವಾದುದನ್ನೂ ಮಾಡುತ್ತಾರೆ. ಇದು ಹೇಗೆ ಸಾಧ್ಯ ? ಪ್ರಸಕ್ತ ವೈಜ್ಞಾನಿಕ ತಿಳಿವಳಿಕೆಯ ಹಂತದಲ್ಲಿ ಇದಕ್ಕೆ ಸರ್ವರಿಗೂ ಒಪ್ಪಿಗೆಯಾಗುವಂತಹ ವಿವರಣೆಯನ್ನು ಕೊಡಲು ವಿಜ್ಞಾನಿಗಳಿಗೆ ಸಾಧ್ಯವಾಗಿಲ್ಲ. ಉದಾಹರಣೆಗೆ, ಮಹಾರಾಷ್ಟ್ರದ ಕುಗ್ರಾಮವೊಂದರಲ್ಲಿ ಒಬ್ಬ ಮಹಿಳೆಯ ಮೇಲೆ ಒಂದು ದೆವ್ವ ಬಂದಾಗ ಆವಳು ಶುದ್ಧ ಬಂಗಾಳಿ ಭಾಷೆಯಲ್ಲಿ ಮಾತಾಡುತ್ತಿದ್ದಳು. ಆ ಮಹಿಳೆಗೆ ಬಂಗಾಳಿ ಭಾಷೆಯ ಸಂಪರ್ಕದ ಮಾತಿರಲಿ, ಅಂತಹುದೊಂದು ಭಾಷೆ ಇದೆ ಎಂದೂ ತಿಳಿದಿರಲಿಲ್ಲ. ಇನ್ನೊಂದು ಪ್ರಕರಣದಲ್ಲಿ ಒಬ್ಬ ಮಹಿಳೆಯ ಮೇಲೆ ಐದು ವರ್ಷದ ಹಿಂದೆ ಸತ್ತ ಅಪರಿಚಿತ ವ್ಯಕ್ತಿಯ ದೆವ್ವವೊಂದು ಬಂದು ತನ್ನ ವೈಯಕ್ತಿಕ ಜೀವನದ ಹಲವು ವೃತ್ತಾಂತಗಳನ್ನು ಹೇಳಿತು. ಈ ಮಹಿಳೆ ಸತ್ತ ವ್ಯಕ್ತಿಯನ್ನು ನೋಡಿದವಳಲ್ಲ, ಕೇಳಿದವಳಲ್ಲ, ಏನೊಂದೂ ತಿಳಿದವಳಲ್ಲ. ಇಂತಹ ಅಪರೂಪ ಪ್ರಕರಣಗಳನ್ನು ಬಿಟ್ಟರೆ ಹೆಚ್ಚಿನ ಪ್ರಕರಣಗಳಲ್ಲಿ ನಡೆಯುವ ವಿಶೇಷ ಚಮತ್ಕಾರಗಳನ್ನು ತರ್ಕಬದ್ಧವಾಗಿ ವಿವರಿಸಬಹುದು.

ಪ್ರಕೃತಿ ನಮಗೆ ಎಲ್ಲವನ್ನೂ ಹೆಚ್ಚಿನ ಪ್ರಮಾಣದಲ್ಲಿಯೇ ನೀಡಿದೆ. ಪ್ರತಿ ಅಂಗಾಂಗದಲ್ಲಿ ನಮ್ಮ ಊಹೆಗೂ ನಿಲುಕದಷ್ಟು ಶಕ್ತಿ ಸಾಮರ್ಥ್ಯಗಳನ್ನು ತುಂಬಿದೆ. ನಮ್ಮ ದಿನನಿತ್ಯದ ಚಟುವಟಿಕೆಗಳಿಗೆ ಈ ಸಾಮರ್ಥ್ಯದ ಸೇಕಡ ಒಂದರಷ್ಟನ್ನೂ ನಾವು ಬಳಸುವುದಿಲ್ಲ. ಉಳಿದ ೯೯ ಭಾಗ ಮೀಸಲಾಗಿ ಉಳಿದಿರುತ್ತದೆ. ಉದಾಹರಣೆಗೆ, ಪಿತ್ತಜನಕಾಂಗದ ಬಹು ಭಾಗವನ್ನು ಶಸ್ತ್ರಕ್ರಿಯೆ ಮಾಡಿ ತೆಗೆದರೂ ಉಳಿದ ಚಿಕ್ಕ ಭಾಗ ದೇಹದ ಸಾಮಾನ್ಯ ದೈನಂದಿನ ಕ್ರಿಯೆಯನ್ನು ನಡೆಸಿಬಿಡುತ್ತದೆ. ಹಾಗೆಯೇ ಒಂದು ಶ್ವಾಸಕೋಶ, ಒಂದು ಮೂತ್ರಜನಕಾಂಗವನ್ನು ತೆಗೆದುಹಾಕಿದರೂ ನಡೆದೀತು. ವಿಶೇಷ ಸಂದರ್ಭದಲ್ಲಿ, ಆವಶ್ಯಕತೆ ಬಿದ್ದಾಗ, ಈ ಮೀಸಲು ಶಕ್ತಿ ನಮ್ಮ ನೆರವಿಗೆ ಬರುತ್ತದೆ. ಸಣಕಲು ಮನುಷ್ಯ, ಪ್ರಾಣಭಯ

ಉಂಟಾದಾಗ, ನಾಲ್ಕು ಜನರೊಂದಿಗೆ ಹೋರಾಡಿ ಜಯಗಳಿಸುವುದಿಲ್ಲವೆ ? ವಿದ್ಯಾರ್ಥಿಗಳು ಹಾಸ್ಟೆಲ್‌ನಲ್ಲಿ ಬಾಜಿ ಕಟ್ಟಿ ಇಪ್ಪತ್ತು ಮೂವತ್ತು ಇಡ್ಲಿಗಳನ್ನು ತಿನ್ನುವುದಿಲ್ಲವೇ ? ಬೆನ್ನಟ್ಟಿ ಬರುವ ವನ್ಯ ಮೃಗದಿಂದ ತಪ್ಪಿಸಿಕೊಳ್ಳಲು ಬೊಜ್ಜು ಹೊಟ್ಟೆಯುವ ನಾಗಾಲೋಟದಿಂದ ಓಡುವುದಿಲ್ಲವೇ ? ಕೆಲವರು ಆವೇಶ ಬಂದಾಗ ಸೂರು ಹಾರುವಂತೆ ಕಿರುಚಾಡಿ, ಅತಿ ಮಾನವರಾಗುವುದಿಲ್ಲವೇ ? ದೇವರು, ದೆವ್ವ ಬಂದಿದೆ ಎಂದಾಗ ಮನುಷ್ಯ ಇಂತಹ ಆವೇಶಕ್ಕೆ ಒಳಗಾಗುತ್ತಾನೆ. ಆತನ ಬುದ್ಧಿ, ಶರೀರ ತಮ್ಮಗಳ ಮೀಸಲು ಶಕ್ತಿಗಳಿಂದ ಸಜ್ಜಾಗುತ್ತವೆ. ನರಮಂಡಲದಲ್ಲಿ, ಹಾರ್ಮೋನ್‌ಗಳ ಕ್ರಿಯೆಗಳಲ್ಲಿ ವಿಶೇಷ ಬದಲಾವಣೆಗಳಾಗುತ್ತವೆ. ಈ ಸ್ಥಿತಿಯಲ್ಲಿ ಚಾಟಿಯಿಂದ, ಕತ್ತಿಯಿಂದ ಹೊಡೆದುಕೊಂಡರೂ ವ್ಯಕ್ತಿಗೆ ನೋವಾಗುವುದಿಲ್ಲ. ಸೇರಕ್ಕಿ ಅನ್ನ, ಗಡಿಗೆ ಪಾಯಸವನ್ನು ಕುಡಿದು ದಕ್ಕಿಸಿಕೊಳ್ಳಬಹುದು. ತಲೆಯ ಮೇಲೆ ತೆಂಗಿನಕಾಯಿ ಒಡೆಸಿಕೊಳ್ಳಬಹುದು. ಈ ಕೆನ್ನೆಯಲ್ಲಿ ತೂರಿ ಆ ಕೆನ್ನೆಯಿಂದ ಆಚೆಗೆ ಬರುವಂತೆ ಕಬ್ಬಿಣದ ತಂತಿಯನ್ನು ಚುಚ್ಚಿಕೊಳ್ಳಬಹುದು. ಹತ್ತು ಜನ ಹಿಡಿದರೂ ಬಿಡಿಸಿಕೊಂಡು ಕುಣಿದಾಡಬಹುದು.

ಇನ್ನು ಕೆಲವು ಸಲ ಈ ಅತಿಶಯಗಳು ಉತ್ಪ್ರೇಕ್ಷಿತ ವರದಿಗಳಾಗಿರುತ್ತವೆ. ನಿರಕ್ಷರಕುಕ್ಷಿಯೊಬ್ಬಳು, ತಾನು ಕೇಳಿದ ಆದರೆ ಜಾಗೃತಾವಸ್ಥೆಯಲ್ಲಿ ಉಪಯೋಗಿಸಲು ನಾಚಿಕೆಪಡುವ ಒಂದೆರಡು ಇಂಗ್ಲಿಷ್ ಪದಗಳನ್ನು ದೈವ, ದೆವ್ವ ಬಂದಿದೆ ಎನ್ನುವ ಸ್ಥಿತಿಯಲ್ಲಿ ಉಚ್ಚರಿಸಿಬಿಟ್ಟರೆ, ಅದು ಕಿವಿಯಿಂದ ಕಿವಿಗೆ ಹರಡಿ ಕೊನೆಗೆ ದೆವ್ವ ಬಂದಾಗ ನಿಂಗಿ ಬರೀ ಇಂಗ್ಲಿಷಿನಲ್ಲೇ ಮಾತಾಡುತ್ತಾಳೆ ಎಂದಾಗಿ ಬಿಡುತ್ತದೆ!

ಜೀವನೋಪಾಯಕ್ಕಾಗಿ ಅಥವಾ ಸ್ಥಾನಮಾನ ಮತ್ತು ಹಣ ಸಂಪಾದನೆಗಾಗಿ ಮೈಮೇಲೆ ದೇವರನ್ನು ಬರಿಸಿಕೊಳ್ಳುವ ವ್ಯಕ್ತಿಗಳು ತಮ್ಮ ಅತಿಶಯಗಳನ್ನು ಪವಾಡ ಸದೃಶ ರೀತಿಯಲ್ಲಿ ಉತ್ಪ್ರೇಕ್ಷೆ ಮಾಡಿ ವ್ಯವಸ್ಥಿತವಾಗಿ ಪ್ರಚಾರ ಮಾಡಿಸುತ್ತಾರೆ. ಕಣ್ಣಿಲ್ಲದವರಿಗೆ ಕಣ್ಣು ಬಂದಿತು, ಮೂಗರಿಗೆ ಮಾತು ಬಂತು, ಹೆಳವನೊಬ್ಬ ನಡೆದಾಡಿಬಿಟ್ಟ ಎಂದು ಹೇಳಿಸುತ್ತಾರೆ. ನಕಲಿ ರೋಗಿಗಳನ್ನು ಎಲ್ಲರ ಮುಂದೆ ಕರೆಸಿ ದಿಢೀರ್

ಗುಣ ಮಾಡುವ ನಾಟಕವಾಡಿ ಮುಗ್ಧರನ್ನು ನಂಬಿಸುತ್ತಾರೆ. ನಂಬದವರನ್ನು, ಏಕೆ, ಹೇಗೆ ಎಂದು ಪ್ರಶ್ನಿಸುವ 'ತಲೆಹರಟೆ'ಗಳನ್ನು ದೇವರು ಕ್ರೂರವಾಗಿ ಶಿಕ್ಷಿಸುತ್ತಾನೆ ಎಂಬ ಬೆದರು ಗೊಂಬೆಯನ್ನು ಕಟ್ಟುತ್ತಾರೆ. ತಮ್ಮ ಮೇಲೆ ಅನುಮಾನ ಪಡುವ ನಾಸ್ತಿಕರು ರಕ್ತಕಾರಿಕೊಂಡು ಸಾಯುತ್ತಾರೆ ಎಂದು ಹೆದರಿಸುತ್ತಾರೆ.

**ಅನುಕೂಲ ಅನಾನುಕೂಲಗಳು**

ದೇವರು, ದೆವ್ವ ಮೈ ಮೇಲೆ ಬರುವ ವಿದ್ಯಮಾನದಿಂದ ವ್ಯಕ್ತಿಗೆ, ಸಮಾಜಕ್ಕೆ ಏನೇನು ಅನುಕೂಲ, ಏನೇನು ಅನಾನುಕೂಲಗಳಾಗುತ್ತವೆ ಎಂಬುದನ್ನು ಗಮನಿಸಿದರೆ ಅನುಕೂಲಗಳಿಗಿಂತ ಅನಾನುಕೂಲಗಳೇ ಹೆಚ್ಚು ಎಂಬುದು ಸ್ಪಷ್ಟವಾಗುತ್ತದೆ. ಮೊದಲು ದೇವರು ಮೈಮೇಲೆ ಬರುವ ಸಂಗತಿಯನ್ನೇ ತೆಗೆದುಕೊಳ್ಳೋಣ. ಇದರಿಂದ ಆ ವ್ಯಕ್ತಿಗೆ ಒಂದು ವಿಶೇಷ ಸ್ಥಾನಮಾನ, ಮರ್ಯಾದೆಗಳು ಲಭ್ಯವಾಗುತ್ತವೆ. ಜೀವನೋಪಾಯಕ್ಕೆ ದಾರಿಯಾಗುತ್ತದೆ. ಕಷ್ಟನಷ್ಟಗಳಿಗೆ ತುತ್ತಾದ ಜನಸಾಮಾನ್ಯರಿಗೆ ಒಂದು ಆಸರೆ, ಸಮಾಧಾನ ದೊರೆಯುತ್ತದೆ. ನೋವು ನಿರಾಶೆ ಮುತ್ತಿದಾಗ ನಾವು ಅಸಹಾಯಕರಾಗುತ್ತೇವೆ, ನಿಷ್ಕ್ರಿಯರಾಗುತ್ತೇವೆ. ಜಡತೆ ನಮ್ಮನ್ನು ಆವರಿಸುತ್ತದೆ. ತಾಳಿಕೊಳ್ಳಲು, ಪರಿಸ್ಥಿತಿಯನ್ನು ಎದುರಿಸಲು, ನಮ್ಮಲ್ಲಿರುವ ಶಕ್ತಿಯನ್ನು ಸಂಚಯಿಸಲು ನಾವು ಪ್ರಯತ್ನ ಮಾಡುವುದಿಲ್ಲ. ಆಗ ನಮಗೆ ಆಸರೆ ಬೇಕು, ಪ್ರಚೋದನೆ ಬೇಕು. "ಈಗ ಬಂದಿರುವ ಕಷ್ಟ ತಾತ್ಕಾಲಿಕ, ಒಳ್ಳೆಯ ಸುಖದ ದಿನಗಳು ಮುಂದಿವೆ, ಏಳು, ಪ್ರಯತ್ನಮಾಡು, ಸಹಾಯಕ್ಕೆ ನಾನಿದ್ದೇನೆ" ಎನ್ನುವ ರಕ್ಷಕ ಬೇಕು. ಇದನ್ನು ದೇವರು ಬರುವ ವ್ಯಕ್ತಿ ಮಾಡುತ್ತಾನೆ. ಆರ್ತರಿಗೆ ತಾತ್ಕಾಲಿಕವಾಗಿಯಾದರೂ ಸಮಾಧಾನ ನೀಡುತ್ತಾನೆ. ಈ ತಾತ್ಕಾಲಿಕ ಆಸರೆ, ಸಮಾಧಾನದಿಂದ ವ್ಯಕ್ತಿ ಚೇತರಿಸಿಕೊಂಡು ಸಮಸ್ಯೆಯನ್ನು ಎದುರಿಸುತ್ತಾನೆ. ತನ್ನ ಬೆಲೆ ಬಾಳುವ ಹಸು ಕಾಡಿನಿಂದ ಮನೆಗೆ ವಾಪಸ್ ಬರದಿದ್ದಾಗ, ಕಂಗಾಲಾದ ರೈತ, ಬೇರೇನೂ ಮಾಡಲು ತೋರದೆ, ದೈವದ ಮೊರೆ ಹೋದ. ತನ್ನ ಹಸುವಿಗೆ ಅಪಾಯವೇನೂ ಆಗಿಲ್ಲ, ಸಿಗುತ್ತದೆ ಎಂದು ದೈವ ನುಡಿದಾಗ, ಹೋಗಿ ಹುಡುಕು ಎಂದು ಆಜ್ಞಾಪಿಸಿದಾಗ,

ಹುಮ್ಮಸ್ಸಿನಿಂದ ವಾಪಸ್ ಹೋಗಿ ಹುಡುಕಿದ. ಹಸು ಸಿಕ್ಕಿತು. ಹಾಗೆಯೇ ಹುಡುಕಿದ್ದರೂ ಅದು ಸಿಗುತ್ತಿತ್ತು ಎಂಬುದು ಬೇರೆ ಮಾತು.

ಆದರೆ ಬಹು ಪಾಲು ಪ್ರಕರಣಗಳಲ್ಲಿ ಈ ದೇವರ ಪ್ರತಿನಿಧಿಗಳು ಉಳಿದವರ ಮೇಲೆ ಅಧಿಕಾರ ಚಲಾಯಿಸಲಾರಂಭಿಸುತ್ತಾರೆ. ಜನರು ತಮ್ಮನ್ನು ಅವಲಂಬಿಸುವಂತೆ ಮಾಡಿಬಿಡುತ್ತಾರೆ. ಕಾಣಿಕೆಯ ರೂಪದಲ್ಲಿ ಹಣ, ಒಡವೆ ವಸ್ತ್ರಗಳ ಸಂಗ್ರಹದಲ್ಲಿ ತೊಡಗಿ, ದುರಾಶೆಯ ಪ್ರತಿಮೂರ್ತಿಗಳಾಗುತ್ತಾರೆ. ಬಡವರ, ಮುಗ್ಧರ ಶೋಷಣೆ ಮಾಡಲಾರಂಭಿಸುತ್ತಾರೆ. ಅವರ ಮನಸ್ಸಿನಲ್ಲಿ ಸಲ್ಲದ ಭಯ ಬಿತ್ತಿ, ಬೆದರಿಸಿ, ಕಾಡಿಸುತ್ತಾರೆ. ಖಾಯಿಲೆಗಳಿದ್ದಾಗ "ಆಸ್ಪತ್ರೆಗೆ ಹೋಗಿ ಚಿಕಿತ್ಸೆ ಮಾಡಿಸಿಕೊಳ್ಳಿ" ಎಂದು ಹೇಳದೆ, "ಇನ್ನಷ್ಟು ಪೂಜೆಮಾಡಿ, ಕಾಣಿಕೆ ನೀಡಿ, ಬಲಿ ಕೊಡಿ ಎಲ್ಲವೂ ಸರಿಹೋಗುತ್ತದೆ" ಎಂದು ಪೊಳ್ಳು ಆಶ್ವಾಸನೆ ನೀಡುತ್ತಾರೆ. ಇದರಿಂದ ಖಾಯಿಲೆ ಹಳೆಯದಾಗಿ, ರೋಗಿ ಸವೆಯುತ್ತಾನೆ. ಕೊನೆಗೆ ಸಾವನ್ನಪ್ಪುತ್ತಾನೆ.

ಶೃಂಗೇರಿಯಲ್ಲಿ ಅರುವತ್ತು ವರ್ಷದ ಸುಬ್ಬಮ್ಮನಿಗೆ ಮೂರ್ಛೆ ರೋಗ ಬರಲು ಪ್ರಾರಂಭವಾಯಿತು. ಇದು ಭೂತಚೇಷ್ಟೆ ಎಂದು ನಂಬಿದ ಮನೆಯವರು ಆಕೆಯನ್ನು ಅನೇಕ ದೇವರು ಅಥವಾ ಗಣ ಬರುವವರ ಬಳಿಗೆ ಕರೆದುಕೊಂಡು ಹೋದರು. ಕಾಣಿಕೆ, ವಿಶೇಷ ಪೂಜೆ, ಬಲಿ ಎಂದು ಒಂದು ವರ್ಷದಲ್ಲಿ ಮೂರುಸಾವಿರ ರೂಪಾಯಿಗಳಷ್ಟು ಖರ್ಚು ಮಾಡಿದರು. ಕಡೆಗೆ ಭೂತಗಣಗಳ ಒಡೆಯನಾದ ಧರ್ಮಸ್ಥಳದ ಮಂಜುನಾಥನ ದೇವಸ್ಥಾನಕ್ಕೆ ಕರೆದೊಯ್ದರು. ಅದೃಷ್ಟವಶಾತ್ ಅಲ್ಲಿ ಇದು ಭೂತಚೇಷ್ಟೆಯಲ್ಲ, ದೇಹದಲ್ಲಿ ಹುಟ್ಟಿದ ಖಾಯಿಲೆ ಎಂದು ಹೇಳಿ ವೈದ್ಯರಲ್ಲಿಗೆ ಹೋಗಲು ಹೇಳಲಾಯಿತು.

ನೆರೆಹಳ್ಳಿಯೊಂದರಲ್ಲಿ ಮೂವತ್ತೈದು ವರ್ಷದ ಕೃಷ್ಣಯ್ಯನಿಗೆ ಕಳೆದ ಆರು ತಿಂಗಳಿನಿಂದಲೂ ಸ್ವಸ್ಥವಿಲ್ಲ. ಹಸಿವೆ ಆಗುವುದಿಲ್ಲ. ಏನು ತಿಂದರೂ ರುಚಿ ಇಲ್ಲ. ಸುಮ್ಮನೆ ಕುಳಿತಿದ್ದರೂ ಸುಸ್ತು ಎನ್ನುತ್ತಿರುತ್ತಾನೆ. ಯಾವುದರಲ್ಲೂ ಆಸಕ್ತಿ ಇಲ್ಲ. ಕೆಲಸ ಕಾರ್ಯ ಮಾಡದೆ, ಮೂದೇವಿಯಂತೆ ಕುಳಿತಿರುತ್ತಾನೆ. ಮಧ್ಯರಾತ್ರಿಗೆ ಎಚ್ಚರವಾಗಿಬಿಟ್ಟರೆ, ಮತ್ತೆ

ನಿದ್ರೆ ಬರದು. ಶರೀರದ ಒಂದೊಂದು ನರವೂ ಸೆಳೆಯುತ್ತದೆ ಎನ್ನು ತ್ತಾನೆ. ಆಗಾಗ್ಯ ನಾನೇಕೆ ಬದುಕಿರಬೇಕು, ಸಾಯುವುದೇ ಮೇಲು ಎನ್ನು ತ್ತಾನೆ. ಯಾವುದೋ ಘಾಟಿ ದೆವ್ವದ ಪೀಡೆಯಿಂದ ಹೀಗಾಗಿದೆ ಎಂದು ಎಲ್ಲ ಗಣಗಳೂ ನಿಮಿತ್ತ ನುಡಿದವು. ಅದರ ಉಚ್ಚಾಟನೆಗೆ ಅವು ಕೇಳಿದ ಎಲ್ಲ ಪೂಜೆ, ಬಲಿಗಳನ್ನೂ ಮಾಡಿಯಾಯಿತು. ತೊಂದರೆ ಕಡಿಮೆಯಾಗು ವುದರ ಬದಲು ಹೆಚ್ಚಾಯಿತು. ಮನೆಯವರು ಕೈ ಚೆಲ್ಲಿ ಕುಳಿತರು. ಕೃಷ್ಣಯ್ಯನ ತೊಂದರೆಗಳು ಖಿನ್ನತೆ, ಮನೋಬೇನೆಯ ಚಿಹ್ನೆಗಳು. ಮೊದಲೇ ಮನೋವೈದ್ಯರನ್ನು ಕಂಡು, ಖಿನ್ನತೆ ನಿವಾರಕ ಔಷಧಗಳನ್ನು ಸೇವಿಸಿದ್ದರೆ ಖಾಯಿಲೆ ಎಂದೋ ಗುಣವಾಗಿ ಬಿಡುತ್ತಿತ್ತು.

ಈ ದೈವಪುತ್ರರು, ಗಣಮಕ್ಕಳು ಕಾಣಿಕೆಯ ರೂಪದಲ್ಲಿ ಉಳ್ಳವ ರನ್ನು, ಇಲ್ಲದವರನ್ನು ಸಮಾನವಾಗಿ ಸುಲಿಯುತ್ತಾರೆ. ನಿರ್ದಿಷ್ಟ ದಿನ ಗಳಲ್ಲಿ ಅಲ್ಲದೆ, ಬೇರೆ ದಿವಸಗಳಲ್ಲಿ ತುರ್ತಾಗಿ ದೈವವನ್ನು ಕರೆಸಬೇಕಾದರೆ, ಈ ಪ್ರತಿನಿಧಿಗಳಿಗೆ ವಿಶೇಷ ಸಲಾಮು ಹೊಡೆದು, ಭಾರಿ ಕಾಣಿಕೆ ನೀಡ ಬೇಕಾಗುತ್ತದೆ. ಆ ದೈವದ ಶಕ್ತಿಯ ಜನಪ್ರಿಯತೆಯ ಮೇಲೆ ಈ ಕಾಣಿ ಕೆಯುದರ ನಿರ್ಧಾರವಾಗುತ್ತದೆ. ಕೆಲವು ಸಾರಿ ಇದು ಹಲವು ನೂರು ರೂಪಾಯಿಗಳಾಗಬಹುದು.

ಶೃಂಗೇರಿಯ ಸುತ್ತ ಮುತ್ತ ಈ ರೀತಿ ದುಡ್ಡು ಕೇಳುವ ಭೂತ ಗಣಗಳು ಬೇಕಾದಷ್ಟಿವೆ. ಜನತೆಯ ಮೇಲೆ ಈ ಗಣ ಮಕ್ಕಳ ಪ್ರಭಾವ, ಹತೋಟಿ ಸಾಕಷ್ಟಿದೆ. ಜನರ ಮುಗ್ಧತೆ, ಮೌಢ್ಯತೆಯನ್ನೇ ಬಂಡವಾಳ ಮಾಡಿಕೊಂಡು ತಮ್ಮ ಕಿಲಾಡಿತನ, ಚಲಾಕು ತನದಿಂದ ಆಸ್ತಿಪಾಸ್ತಿ ಮಾಡಿಕೊಂಡು ಮೆರೆಯುತ್ತಿರುವ ಇವರ ಹಿನ್ನೆಲೆ ಯನ್ನು ಕೆದಕಿದಾಗ ಸ್ವಾರಸ್ಯಕರ ಸಂಗತಿಗಳು ಹೊರಬಿದ್ದುವು. ಕಟ್ಟೆಮನೆ ಗಣಮಗ ಇಂಥವರಲ್ಲಿ ಒಬ್ಬ. ಕೇವಲ ಮೂರು ವರ್ಷಗಳ ಹಿಂದೆ ಆತ ಒಬ್ಬ ನಿರ್ಗತಿಕ ಮಡಿವಾಳ. ಒಂದು ಹೊತ್ತಿಗಿದ್ದರೆ, ಇನ್ನೊಂದು ಹೊತ್ತಿ ಗಿಲ್ಲದ ಬಡತನ. ಒಂದು ದಿನ ಅವನ ಮನೆಗೆ 'ದೂರದ ನೆಂಟರು' ಎಂದು ಹೇಳಿಕೊಂಡ ಇಬ್ಬರು ಬಂದು ನೆಲೆ ಊರಿದರು. ಅವರು ಬಂದ ಒಂದು ವಾರದನಂತರ, ಈ ಮಡಿವಾಳ, ಒಂದು ದಿನ ನಡುಬೀದಿಗೆ ಬಂದು ಆವೇಶದಿಂದ ಕುಣಿದ. ಹೂಂಕರಿಸಿ 'ವೀರಭದ್ರಾ' ಎಂದ,

ಆ ಇಬ್ಬರು ನೆಂಟರು, ನಡು ಬಗ್ಗಿಸಿ, ಅವನಿಗೆ ಪೂಜೆಮಾಡಿ, ಇದು ವೀರ ಭದ್ರಗಣ ಎಂದು ಸಾರಿದರು. ಕೇರಿಯುವರು ಇದನ್ನು ನಂಬಿ, ನಮ್ಮನ್ನು ಕಾಪಾಡಪ್ಪಾ ಎಂದು ಕಾಯಿ ಒಡೆದು ಪೂಜೆ ಸಲ್ಲಿಸಿದರು. ಮೂರು ದಿವಸಗಳ ತರುವಾಯು, ಈ ಮಡಿವಾಳ ಊರಿನ ಹೊರಗೆ ಬೇರೆಯುವ ರೊಬ್ಬರಿಗೆ ಸೇರಿದ ತೋಟಕ್ಕೆ ಹೋಗಿ, ಅಲ್ಲಿ ಬಿದ್ದಿದ್ದ ಒಂದು ಕಲ್ಲಿನ ಮುಂದೆ ಆವೇಶದಿಂದ ಕುಣಿಯು ತೊಡಗಿದ. ಮಡಿವಾಳನ ಮೇಲೆ ಮತ್ತೆ ಗಣ ಬಂದಿರುವುದು ಹಳ್ಳಿಯುವರಿಗೆಲ್ಲಾ ಗೊತ್ತಾಗಿ ಅವನ ಸುತ್ತ ಜಮಾಯಿಸಿದರು. ಕೆಲವರು ಅಡ್ಡಬಿದ್ದು ದೇವರು ಬಂದ ಕಾರಣವನ್ನು ವಿಚಾರಿಸಿದರು. "ಇದು ನನ್ನ ವಾಸಸ್ಥಾನ. ಇಲ್ಲಿ ನನಗೊಂದು ಗುಡಿ ಯಾಗಬೇಕು. ನಾನು ಇಲ್ಲಿ ನೆಲೆಸಿ, ಭಕ್ತರುಗಳ ಇಷ್ಟಾರ್ಥಗಳನ್ನು ನೆರವೇರಿಸುತ್ತೇನೆ. ದುಷ್ಟ ದೆಯ್ಯ, ಪಿಶಾಚಿಗಳ ಪೀಡೆಯಿಂದ ಹಳ್ಳಿಯನ್ನು ರಕ್ಷಿಸುತ್ತೇನೆ" ಎಂದು ವೀರಭದ್ರ ಗಣ ಅಪ್ಪಣೆ ಕೊಟ್ಟಿತು. ಹೀಗೆ ಮೂರು ಎಕರೆ ತೋಟ ಮಡಿವಾಳನಿಗೆ ದಕ್ಕಿತು. ಮಡಿವಾಳನ ಸಹ ಚರರು ಒಂದು ಸಣ್ಣ ಗುಡಿ ಕಟ್ಟಿದರು. ರೂಪವಿಲ್ಲದ ಮೊಂಡು ಕಲ್ಲೇ ಉದ್ಭವ ಮೂರ್ತಿಯಾಯಿತು ! ಅಮಾವಾಸ್ಯೆ, ಪೂರ್ಣಿಮೆಗೆ ಗಣ ಬರಲು ಪ್ರಾರಂಭವಾಯಿತು. ಮಡಿವಾಳನ ಅಂತಸ್ತು ಏರಿತು. ಬಟ್ಟೆ ಒಗೆಯುವ ಕೆಲಸ ಬಿಟ್ಟ. ತೋಟದ ಉತ್ಪತ್ತಿಯೇ ಆತನ ಸಂಸಾರಕ್ಕೆ ಸಾಕಷ್ಟು ಆಗಿ ಮಿಕ್ಕಿತು. ಈ ಸಹಚರರು ಹಳ್ಳಿಗಳಲ್ಲಿ ತಿರುಗಿ, ಎಲ್ಲರನ್ನೂ ಮಾತಾಡಿಸಿ ಕೊಂಡು, ಯಾರ ಮನೆಯಲ್ಲಿ ಏನು ಕಷ್ಟವಿದೆ, ಏನು ಸಮಸ್ಯೆ ಇದೆ, ಊರಿನ ಪ್ರಮುಖ ಸಮಾಚಾರ ಎಲ್ಲವನ್ನೂ ಗಮನಿಸಿ, ಮಡಿವಾಳನಿಗೆ ವರದಿ ಮಾಡುವರು. ಕಷ್ಟ ಸಮಸ್ಯೆಗಳಿದ್ದ ಮನೆಯುವರು ನಿಮಿತ್ತ ಕೇಳಲು ಬಂದಾಗ, ಅವರು ಬಾಯಿ ಬಿಡುವ ಮೊದಲೇ "ನಿಮಗೆ ಇಂತಹ ಕಷ್ಟವಿದೆ, ಹೀಗೆ ಮಾಡಿ" ಎನ್ನುತ್ತಿದ್ದ. ಹಳ್ಳಿಗರಿಗೆ ಆಶ್ಚರ್ಯ. ನಿಜಕ್ಕೂ ಈ ಗಣ ಮಹಿಮೆಯುಳ್ಳದ್ದು ಎಂದು ನಿರ್ಧರಿಸಿ ಪ್ರಚಾರ ಮಾಡಿದರು. ಜೊತೆಗೆ ಸಹಚರರು ವೀರಭದ್ರಗಣದ ಶಕ್ತಿ ಸಾಮರ್ಥ್ಯ, ಅದು ಸಾಧಿಸಿದ ಪವಾಡಗಳ ಬಗ್ಗೆ ಕಥೆ ಕಟ್ಟಿ, ಬಣ್ಣ ಹಚ್ಚಿ, ಜೋರಿನಿಂದ ಪ್ರಚಾರ ನಡೆಸಿದರು. ಒಂದು ವರ್ಷದಲ್ಲೇ ಕಟ್ಟೆಮನೆ ಗಣ ಜನಪ್ರಿಯು

ವಾಯಿತು. ಜನ ಮರುಳೋ ಜಾತ್ರೆ ಮರುಳೋ ಎಂಬಂತೆ ಜನ ಬಂದು ಕಾಣಿಕೆ ಒಪ್ಪಿಸಿ ಸಂಭ್ರಮಪಟ್ಟರು. ಬೇಡಿಕೆ ಜಾಸ್ತಿಯಾದಾಗ ವಿಶೇಷ ಕಾಣಿಕೆ ವಸೂಲು ಮಾಡಿ, ಬೇರೆ ದಿವಸಗಳಲ್ಲೂ ಗಣ ಬರುವಂತೆ ವ್ಯವಸ್ಥೆ ಮಾಡಲಾಯಿತು.

ಈ ಪ್ರತಿನಿಧಿಗಳಿಗೆ ಕಾಣಿಕೆ ಸಲ್ಲಿಸಲು, ದೈವಕ್ಕೆ ಸಾಂಪ್ರದಾಯಿಕ ಪೂಜೆ ಸಲ್ಲಿಸಲು ಕುರಿ ಕೋಳಿಗಳ ಬಲಿಕೊಡಲು ಆಸ್ತಿ ಪಾಸ್ತಿ ಮಾರಿಕೊಂಡು, ಸಾಲ ಸೋಲ ಮಾಡಿಕೊಂಡು, ಬೀದಿಪಾಲಾದ ಕುಟುಂಬಗಳಿಗೆ ಲೆಕ್ಕವಿಲ್ಲ. ಬೆವರು ಸುರಿಸಿ ದುಡಿದದ್ದನ್ನು ತಾವು ತಿನ್ನದೆ, ತಮ್ಮ ಹಸು ಮಕ್ಕಳಿಗೆ ತಿನ್ನಿಸದೆ, ಈ ಭೂತಗಣ ಮಕ್ಕಳ ಬಾಯಿಗೆ ಸುರಿದು ಬರಿಹೊಟ್ಟೆ, ಬರಿಮೈಯಾದ ಅಮಾಯಕರ ಸಂಖ್ಯೆ ಕಡಿಮೆ ಅಲ್ಲ.

ಸಹಜವಾಗಿ ನಡೆಯುವ ಘಟನೆಗಳಿಗೆ ಬಣ್ಣ ಕಟ್ಟಿ, ಪ್ರಾಕೃತಿಕ ಏರು ಪೇರುಗಳಿಗೆ ವಿಶೇಷ ಅರ್ಥ ಹಚ್ಚಿ, ಬಂದ ರೋಗರುಜಿನಗಳಿಗೆ, ಕಷ್ಟ ನಷ್ಟಗಳಿಗೆ. ದೆವ್ವಪಿಶಾಚಿ, ಮಾಟ ಮಂತ್ರ, ಕ್ರೂರಗ್ರಹಗತಿಗಳು ಕಾರಣ ಎಂದು ನಂಬಿಸಿ, ಹೆದರಿದವರ ಮೇಲೆ ಹಾವೆಸೆದು, ಉರಿಯುತ್ತಿರುವ ಗಾಯಕ್ಕೆ ಉಪ್ಪು ಸುರಿದು ಚಿನ್ನಾಟವಾಡುವ ಇವರು ಸಮಾಜಕ್ಕೆ ಕಂಟಕ ಪ್ರಾಯರು, ದ್ರೋಹಿಗಳು ಎಂದರೆ ತಪ್ಪಾಗುವುದಿಲ್ಲ. ಬಡತನ ಅಜ್ಞಾನಗಳ ಜೊತೆಗೆ ಸದಾ ಈ ದೈವ ದೆವ್ವಗಳ ಭೀತಿಯ ನೆರಳಿನಲ್ಲೇ ಬದುಕಬೇಕಾಗಿ ಬರುವ ಮುಗ್ಧ ಜನರ ಪಾಡು ನಾಯಿಪಾಡು. ಇವರು ಮಳೆ ಗಾಳಿ ಬಿಸಿಲು ಎನ್ನದೆ, ಹಗಲು ರಾತ್ರಿ ಎನ್ನದೆ, ಹಸಿವು ನೀರಡಿಕೆಗಳನ್ನು ಗಮನಿಸದೆ ದುಡಿದು ಹಣ್ಣಾಗುತ್ತಾರೆ. ಇವರನ್ನು ದೇವರು ಭೂತಗಳ ಹೆಸರಿನಲ್ಲಿ ವಂಚಿಸುವ ಖದೀಮರು ತಿಂದುಂಡು ತೇಗುವರು. ಇದು ಖಂಡನಾರ್ಹ. ಈ ದೈವ ಪ್ರತಿನಿಧಿಗಳಲ್ಲಿ ಪ್ರತಿಫಲಾಪೇಕ್ಷೆ ಇಲ್ಲದೆ ನೆರವೀಯುವವರು ಹಾಗೂ ಜನ ಶ್ರೇಯೋಭಿಲಾಷಿಗಳು ಇಲ್ಲವೆಂದಲ್ಲ. ಆದರೆ ಅವರ ಸಂಖ್ಯೆ ಅತ್ಯಲ್ಪ.

ಇನ್ನು ಮೈಮೇಲೆ ದೆವ್ವ ಬರುವುದು ಸಾಮಾನ್ಯವಾಗಿ ಒಂದು ಪೀಡೆ ಎಂದೇ ಎಲ್ಲೆಡೆ ಪರಿಗಣಿಸಲಾಗುತ್ತದೆ. ವ್ಯಕ್ತಿಗೆ ಇದರಿಂದ ತುಸು ಸಹಾಯವಾಗುತ್ತದೆ. ಮನದ ಬೇಗುದಿಯನ್ನು ಹೊರಚೆಲ್ಲಲು, ಸಂಬಂಧ

ಪಟ್ಟವರಿಂದ ಸ್ವಲ್ಪ ಸಹಾಯ ಸಹಾನುಭೂತಿಯನ್ನು ಗಿಟ್ಟಿಸಲು, ಕ್ಲಿಷ್ಟ ಜವಾಬ್ದಾರಿ ಅಥವಾ ಸನ್ನಿವೇಶದಿಂದ ಮಾನವಾಗಿ ಪಾರಾಗಲು ಇದು ಸಹಾಯ ಮಾಡಬಹುದು. ಆದರೆ ದೀರ್ಘಾವಧಿಯಲ್ಲಿ ಅದು ಸಾಕಷ್ಟು ಸಮಸ್ಯೆಗಳನ್ನು ತಂದೊಡ್ಡುತ್ತದೆ. ವ್ಯಕ್ತಿಯನ್ನು ಬಾಧಿಸುವ ಮೂಲ ಸಮಸ್ಯೆಗೆ ಇದು ಸಮಾಧಾನಕರವಾದ ಶಾಶ್ವತ ಪರಿಹಾರವನ್ನು ನೀಡುವುದಿಲ್ಲ. ಹೀಗಾಗಿ ಕೆಲವು ವ್ಯಕ್ತಿಗಳು ಈ ಅಸಹಜ ನಡೆವಳಿಕೆಯನ್ನು ಅವಧಿಗೊಂದಾವರ್ತಿಯಂತೆ ಹಲವಾರು ವರ್ಷಗಳ ಕಾಲ ಪ್ರದರ್ಶಿಸುತ್ತಲೇ ಇರುತ್ತಾರೆ. ಕಮಲಮ್ಮ ಇದಕ್ಕೆ ಉದಾಹರಣೆ. ಗಂಡನಿಂದ ಒಳ್ಳೆಯ ಆರೈಕೆ ಪಡೆಯಲು ವರ್ಷಕ್ಕೆರಡು ಬಾರಿಯಾದರೂ ಆಕೆಯ ಮೈಮೇಲೆ ಆಕೆಯ ತಾಯಿಯ ಪ್ರೇತ ಬರುತ್ತದೆ.

ಕೆಲವು ಸಲ ಗುಂಪಿನಲ್ಲಿ ಸಾಮೂಹಿಕವಾಗಿ ಜನರ ಮೈಮೇಲೆ ದೇವರು, ದೆವ್ವ ಬರುವುದು ಒಂದು ಸಾಮೂಹಿಕ ಉನ್ಮಾದ ಸ್ಥಿತಿ. ಆ ಸಮಾಜದಲ್ಲಿ ಹಲವು ಹನ್ನೊಂದು ಕಾರಣಗಳಿಂದ ಉಳಿದು ಬೆಳೆಯುವ ಅನೇಕ ಅಹಿತಕರ ಒತ್ತಡ, ಆಕ್ರೋಶಗಳು ಅಪಾಯಕಾರಿ ಅಲ್ಲದ ರೀತಿಯಲ್ಲಿ ಪ್ರಕಟಗೊಳ್ಳಲು ಇದರಿಂದ ಸಹಾಯವಾಗುತ್ತದೆ. ದೇವರು, ದೆವ್ವ ಬಂದಾಗ ಕೂಗಿ ಕಿರುಚಾಡಿ, ಕುಣಿದು ಕುಪ್ಪಳಿಸಿ, ಬಾಯಿಗೆ ಬಂದದ್ದನ್ನು ಆಡಿ, ತಮ್ಮನ್ನು ತಾವೇ ಅಥವಾ ಇತರರನ್ನು ಬಡಿದು ಕೇಕೆ ಹಾಕಿದಾಗ ಎದೆಯೊಳಗೆ ಗಿಡಿದು ತುಂಬಿದ ಆಕ್ರೋಶ ಆವೇಶದ ಕಟ್ಟು ಬಿಚ್ಚಿಹೋಗುತ್ತದೆ. ಎದೆ ಹಗುರಾಗಿ ಶಾಂತಿ ತಾತ್ಕಾಲಿಕವಾಗಿಯಾದರೂ ನೆಲಸುತ್ತದೆ.

ಕೆಲವು ದೇಶಗಳಲ್ಲಿ ಈ ರೀತಿ ಉನ್ಮಾದಕ್ಕೊಳಗಾದವರು ಅಶ್ಲೀಲ ಮಾತುಗಳನ್ನಾಡುತ್ತಾ, ನೇರವಾಗಿ ಅಥವಾ ಪರೋಕ್ಷವಾಗಿ ಲೈಂಗಿಕ ಭಾವನೆಗಳನ್ನು ಬಹಿರಂಗವಾಗಿ ಪ್ರದರ್ಶಿಸುತ್ತಾ ಪ್ರಚೋದಕ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ಕೆಲವು ಜನಾಂಗಗಳಲ್ಲಿ ಇದು ಉದ್ರೇಕಾವಸ್ಥೆಯನ್ನು ಮುಟ್ಟಿ, ದೆವ್ವ ಹಿಡಿದವರು ಬಟ್ಟೆ ಕಳಚಿ ಬೆತ್ತಲಾಗಿ, ಜನನಾಂಗಗಳನ್ನು ಪ್ರಚೋದಕ ರೀತಿಯಲ್ಲಿ ಪ್ರದರ್ಶಿಸುತ್ತಾ ಕುಣಿಯುತ್ತಾರೆ. ಈ ರೀತಿ ಸುಪ್ತ ಮನಸ್ಸಿನ ಲೈಂಗಿಕ ಕಾಮನೆಗಳು ಸ್ವಲ್ಪ

ಮಟ್ಟಿಗೆ ಹಿಂಗಲು, ತೃಪ್ತಿ ದೊರಕಲು ಇದರಿಂದ ಸಹಾಯವಾಗುತ್ತದೆ. ಲೈಂಗಿಕ ವಿಕಾರಗಳನ್ನು ವ್ಯಕ್ತಪಡಿಸಲು ಸಮಾಜ ಈ ಸಂದರ್ಭದಲ್ಲಿ ಅನುಮತಿಕೊಡುತ್ತದೆ ಎನ್ನಬಹುದು.

**ಚಿಕಿತ್ಸೆ**

ಮೈಮೇಲೆ ದೇವರು ಬರುವ ವ್ಯಕ್ತಿಗಳು ಅದನ್ನು ನಿಲ್ಲಿಸಲು ಇಷ್ಟಪಡುವುದಿಲ್ಲ. "ದೇವರು ಬರುತ್ತೇನೆ ಎಂದಾಗ ಬೇಡ ಎನ್ನಲು ನಾವ್ಯಾರು?" ಎನ್ನುತ್ತಾರೆ. ಇದು ತರುವ ವಿಶೇಷ ಸ್ಥಾನಮಾನಗಳನ್ನು ಕಳೆದುಕೊಳ್ಳಲು ಯಾರೂ ಇಷ್ಟಪಡುವುದಿಲ್ಲ. ಮೈಮೇಲೆ ದೆವ್ವ ಬರುವವರು ಮಾತ್ರ ಅದನ್ನು ನಿಲ್ಲಿಸಲು ತವಕ ಪಡುತ್ತಾರೆ. ಚಿಕಿತ್ಸೆ ಬೇಕೆಂದು ಬರುತ್ತಾರೆ. ಮನೋವೈಜ್ಞಾನಿಕ ಸೂತ್ರಗಳನ್ನು ಅನುಸರಿಸಿ ಕೊಡುವ ಯಶಸ್ವೀ ಚಿಕಿತ್ಸಾ ವಿಧಾನಗಳು ಲಭ್ಯವಿವೆ.

ದೇವರು, ದೆವ್ವ ಮೈಮೇಲೆ ಬರುವ ಪ್ರಕರಣದ ಮೂಲಕ ವ್ಯಕ್ತಿ ತನ್ನನ್ನು ಕಾಡುತ್ತಿರುವ ಸಮಸ್ಯೆಯನ್ನು ವ್ಯಕ್ತಪಡಿಸುತ್ತಾನೆ. ಅವನ ಈ ವರ್ತನೆಯ ಗೂಢಾರ್ಥವೇನು ಎಂದು ಮೊದಲು ಅರಿಯ ಬೇಕಾಗುತ್ತದೆ. ಜೊತೆಗೆ ಮೇಲ್ನೋಟಕ್ಕೆ ಕಂಡುಬರುವ ಕೌಟುಂಬಿಕ ಅಥವಾ ಪರಿಸರದ ಆತಂಕಕಾರಿ ಅಂಶಗಳನ್ನು ಗುರುತಿಸಬೇಕು. ವ್ಯಕ್ತಿಯನ್ನು ಕಾಡುತ್ತಿರುವ ಸಮಸ್ಯೆ ಹುಟ್ಟಲು ಮತ್ತು ಮುಂದುವರೆದಿರಲು ಅವನ ಕೊಡುಗೆ ಎಷ್ಟು, ಮನೆಯವರ ಕೊಡುಗೆ ಎಷ್ಟು, ಸಂಬಂಧಪಟ್ಟ ಇತರರ ಕೊಡುಗೆ ಎಷ್ಟು ಎಂದು ವಿಶ್ಲೇಷಣೆ ನಡೆಸಬೇಕು. ಹೀಗೆ ಸಮಸ್ಯೆಯ ವಿಶ್ಲೇಷಣೆ ಆದ ಮೇಲೆ, ಅದಕ್ಕೆ ಸೂಕ್ತ ಪರಿಹಾರವೇನು ಎಂಬ ಬಗ್ಗೆ ತಜ್ಞರು ಪರಸ್ಪರ ಚರ್ಚೆ ಯಿಂದ ಒಂದು ನಿರ್ಧಾರಕ್ಕೆ ಬರುತ್ತಾರೆ. ವ್ಯಕ್ತಿ ಮತ್ತು ಆತನ ಮನೆ ಯವರು ತಮ್ಮ ದೃಷ್ಟಿಕೋನ, ನಡೆವಳಿಕೆಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಂಡು, ಹೆಚ್ಚು ಸಾಮರಸ್ಯ, ಹೊಂದಾಣಿಕೆ ಸಾಧಿಸುವಂತೆ ಪ್ರೋತ್ಸಾಹಿಸಲಾಗುವುದು. ವ್ಯಕ್ತಿ ತನ್ನ ಸಮಸ್ಯೆಯನ್ನು ಸುತ್ತು ಬಳಸಿದ ಮಾರ್ಗದಲ್ಲಿ ಪರೋಕ್ಷವಾಗಿ ಹೇಳುವುದನ್ನು ಬಿಟ್ಟು, ನೇರವಾಗಿ ವ್ಯಕ್ತಪಡಿಸುವಂತೆ ವ್ಯಕ್ತಿಗೆ ಸಲಹೆ ನೀಡಲಾಗುವುದು.

ಕೆಲವು ಸಲ, ವ್ಯಕ್ತಿಯ ಸುಪ್ತ ಮನಸ್ಸಿನಲ್ಲಿರುವ ವಿಷಯಗಳನ್ನು ತಿಳಿದುಕೊಳ್ಳಲು ಮನೋವೈದ್ಯರು ವಿಶೇಷ ತಂತ್ರಗಳನ್ನು ಉಪಯೋಗಿಸುತ್ತಾರೆ. ಮತ್ತುಬರಿಸುವ ಔಷಧಿಯನ್ನು ರಕ್ತ ನಾಳದೊಳಕ್ಕೆ ನಿಧಾನವಾಗಿ ಕೊಡುತ್ತಾ ವ್ಯಕ್ತಿಯನ್ನು ಸುಪ್ತಾವಸ್ಥೆಗೊಯ್ದು, ಆ ಸ್ಥಿತಿಯಲ್ಲಿ ಸಂದರ್ಶನ ನಡೆಸುವ ವಿಧಾನವನ್ನು 'ನಾರ್ಕೋ ಅನಾಲಿಸಿಸ್' ಎನ್ನುತ್ತಾರೆ. ಕನಸುಗಳ ವಿಶ್ಲೇಷಣೆ ಕೂಡ ಸುಪ್ತ ಮನಸ್ಸಿನಲ್ಲಿರುವುದನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ.

ಆವಶ್ಯಕತೆ ಬಿದ್ದರೆ ನಾರ್ಕೋ ಅನಾಲಿಸಿಸ್ ಮಾಡುವಾಗ ಚಿಕಿತ್ಸಕರು ದೆವ್ವ ಬರುವ ವರ್ತನೆಯನ್ನು ಬಿಡುವಂತೆ ವ್ಯಕ್ತಿಯ ಸುಪ್ತ ಮನಸ್ಸಿಗೆ ಬಲವಾದ ಸೂಚನೆ ಕೊಡುತ್ತಾರೆ. ಈ ಸೂಚನೆ ಪರಿಣಾಮಕಾರಿಯಾಗಿ, ವ್ಯಕ್ತಿ ಜಾಗೃತಾವಸ್ಥೆಗೆ ಬಂದ ಮೇಲೂ ಸುಪ್ತ ಮನಸ್ಸಿನ ಮೇಲೆ ಹತೋಟಿ ಸಾಧಿಸುತ್ತದೆ.

ಕೆಲವು ಚಿಕಿತ್ಸಕರು ಸಮ್ಮೋಹನ ವಿದ್ಯೆಯನ್ನು ಚಿಕಿತ್ಸೆಯಲ್ಲಿ ಉಪಯೋಗಿಸುತ್ತಾರೆ. ಸಮ್ಮೋಹನ ಸ್ಥಿತಿಯಲ್ಲಿ ಸುಪ್ತ ಮನಸ್ಸನ್ನು ಬಾಧಿಸುವ ವಿಚಾರಗಳ ಅಧ್ಯಯನ ಹಾಗೂ ಅದಕ್ಕೆ ಸೂಚನೆಗಳನ್ನು ನೀಡಲಾಗುವುದು.

ಹೀಗೆ ಮನೋಚಿಕಿತ್ಸೆ, ಕೌಟುಂಬಿಕ ಚಿಕಿತ್ಸೆ ಹಾಗೂ ಪರಿಸರದಲ್ಲಿ ಸೂಕ್ತ ಬದಲಾವಣೆ ಮಾಡುವುದರ ಮೂಲಕ, ವ್ಯಕ್ತಿಯ ಈ ಅನಪೇಕ್ಷಿತ ನಡೆವಳಿಕೆಗೆ ಮುಕ್ತಾಯ ಹಾಡಬಹುದು. ಚಿಕಿತ್ಸೆ ಯಶಸ್ವಿಯಾಗಲು ವ್ಯಕ್ತಿಯ ಮತ್ತು ಸಂಬಂಧಪಟ್ಟವರೆಲ್ಲರ ಸಂಪೂರ್ಣ ಸಹಕಾರ ಅತ್ಯಗತ್ಯ.

ಕೆಲವು ಬಗೆಯ ಮನೋಬೇನೆಗಳನ್ನು ಮನೆಯವರು ಮತ್ತು ಸುತ್ತ ಮುತ್ತಲಿನವರು ಅರ್ಥಮಾಡಿಕೊಳ್ಳಲಾಗದೇ ಅವು ದೆವ್ವದ ಕಾಟ ಎಂದು ತಪ್ಪಾಗಿ ತಿಳಿದಿರುತ್ತಾರೆ. ಉದಾಹರಣೆಗೆ, ಸುಬ್ಬಮ್ಮ ಕೃಷ್ಣಯ್ಯನ ಪ್ರಕರಣಗಳು. ಇಚ್ಛಿತ್ತ ವಿಕಲತೆ, ಒಳಜನ್ಯ ಖಿನ್ನತೆ ಮುಂತಾದ ತೀವ್ರತರ ಮಾನಸಿಕ ಖಾಯಿಲೆಗಳಲ್ಲಿ ರೋಗಿಗೆ ಚಿತ್ತಭ್ರಮೆಯಾಗಿ ಶೂನ್ಯದಲ್ಲಿ ಮಾತುಗಳು ಕೇಳಲಾರಂಭಿಸಿದರೆ, ಕಣ್ಣಿಗೆ ವಿವಿಧ ಆಕಾರಗಳು ಕಾಣಿಸಿಕೊಂಡರೆ (ಆಡಿಟರಿ ಮತ್ತು ವಿಷುಯಲ್ ಹ್ಯಾಲೂಸಿನೇಷನ್ಸ್),

ಭ್ರಾಂತಿಯಿಂದ ಸಂಶಯಗ್ರಸ್ತನಾದರೆ, ಇವೆಲ್ಲಾ ಭೂತ ಚೇಷ್ಟೆ ಎಂದು ಜನ ಪರಿಗಣಿಸಿ ಬಿಡುತ್ತಾರೆ. ಈ ರೀತಿ ವ್ಯಕ್ತಿ ಮನೋಬೇನೆಯಿಂದ ಬಳಲುತ್ತಿದ್ದರೆ, ಸೂಕ್ತ ಔಷಧೋಪಚಾರ ಮತ್ತು ವಿದ್ಯುತ್ ಕಂಪನ ಚಿಕಿತ್ಸೆಯಿಂದ ಬೇನೆ ಹತೋಟಿಗೆ ಬಂದು ರೋಗಿ ಗುಣಮುಖನಾಗುತ್ತಾನೆ.

ಹೀಗೆ ಹಲವು ಕೋನಗಳಿಂದ ವ್ಯಕ್ತಿಯ ಸ್ಥಿತಿಯನ್ನು ವಿಶ್ಲೇಷಿಸಿ, ಚಿಕಿತ್ಸೆ ನೀಡಲಾಗುವುದು.

## ಸಾರಾಂಶ

ದೇವರು ಇದ್ದಾನೋ ಇಲ್ಲವೋ ? ಇದ್ದರೆ ಯಾವ ರೂಪದಲ್ಲಿ, ಹೇಗೆ, ಎಲ್ಲಿದ್ದಾನೆ? ಈ ಪ್ರಶ್ನೆಗಳಿಗೆ ಸರ್ವಸಮ್ಮತ ಉತ್ತರ ಇನ್ನೂ ಲಭ್ಯವಿಲ್ಲ. ತಮ್ಮ ಸಾಂಸ್ಕೃತಿಕ ಹಾಗೂ ಧಾರ್ಮಿಕ ನಂಬಿಕೆಯಂತೆ ಪ್ರತಿಯೊಬ್ಬ ವ್ಯಕ್ತಿಯೂ ಈ ಬಗ್ಗೆ ತನ್ನದೇ ಆದ ನಂಬಿಕೆಯನ್ನು ಇಟ್ಟುಕೊಂಡಿರುತ್ತಾನೆ. ಸುಲಭಕ್ಕೆ ಅದನ್ನು ಬದಲಾಯಿಸಲು ಒಪ್ಪುವುದಿಲ್ಲ. ವಿಜ್ಞಾನ ಈ ದಿಶೆಯಲ್ಲಿ ಇದು ಹೀಗೇ ಎಂದು ಹೇಳಲು ಇನ್ನೂ ಸಜ್ಜಾಗಿಲ್ಲ. ಹಾಗೆಯೇ ವ್ಯಕ್ತಿ ಸತ್ತನಂತರ, ಆತ ಇನ್ನೊಂದು ರೂಪದಲ್ಲಿ ಇರಲು ಸಾಧ್ಯವೇ ? ದೆವ್ವ, ಭೂತ ಪ್ರೇತಗಳ ಇರುವಿಕೆ ನಿಜವೇ ಎಂಬ ಪ್ರಶ್ನೆಗೆ ಎಲ್ಲರೂ ಒಪ್ಪುವ ಸಮಾಧಾನವಿಲ್ಲ. ಇದುವರೆಗೆ ಯಾರೊಬ್ಬರೂ ಸಾಕ್ಷ್ಯಾಧಾರಗಳ ಸಮೇತ, ನಿರ್ವಿವಾದವಾಗಿ, ಸಂದೇಹಕ್ಕೆ ಎಡೆ ಇಲ್ಲದಂತೆ, ದೆವ್ವ ಇದೆ ಎಂದಾಗಲಿ, ಇಲ್ಲ ಎಂದಾಗಲೀ ಪ್ರಮಾಣೀಕರಿಸಿಲ್ಲ. ದೇವರು ಅಥವಾ ದೆವ್ವದ ಅಸ್ತಿತ್ವದ ಪ್ರಶ್ನೆಯನ್ನು ವೈಯಕ್ತಿಕ ನಂಬಿಕೆಯ ಆವರಣಕ್ಕೆ ಬಿಟ್ಟು ಬಿಡೋಣ. ವ್ಯಕ್ತಿ ಅದನ್ನು ಬೇಕಾದರೆ ನಂಬಲಿ ಅಥವಾ ಇದೆಲ್ಲಾ ಬರೀ ಬುರುಡೆ ಎಂದುಕೊಳ್ಳಲಿ. ಆದರೆ ಮೈಮೇಲೆ ದೇವರು, ದೆವ್ವ ಬರುವ ಸಂಗತಿಯನ್ನು ಹಾಗೆ ವೈಯಕ್ತಿಕ ಇಷ್ಟಾನಿಷ್ಟಕ್ಕೆ ಬಿಡಲು ಸಾಧ್ಯವಿಲ್ಲ. ಇದು ಕೇವಲ ವೈಯಕ್ತಿಕ ನಂಬಿಕೆಯ ಪ್ರಶ್ನೆಯಾಗಿ ಉಳಿಯದೆ, ಹಲವರ ಇಡೀ ಜೀವನವ ಮೇಲೆ, ಸಮಾಜದ ಮೇಲೆ ತನ್ನ ಪರಿಣಾಮವನ್ನು ಬೀರುತ್ತದೆ. ಅನೇಕ ಜನರ ಸುಖ,

ಸಂತೋಷ, ಆರೋಗ್ಯ, ಕೊನೆಗೆ ಜೀವನ ಧಾಟಿ ಇದನ್ನು ಅವಲಂಬಿಸಿದೆ. ಸುಲಭವಾಗಿ ಆಧುನಿಕ ಚಿಕಿತ್ಸಾ ವಿಧಾನಗಳಿಗೆ ಬಗ್ಗುವ ಖಾಯಿಲೆ ಬಂದಾಗ ಆಸ್ಪತ್ರೆಗೆ ಹೋಗಿ ವೈದ್ಯರನ್ನು ಕಂಡು ವಾಸಿಮಾಡಿಕೊಳ್ಳದೆ, ಇದು ಭೂತ ಚೇಷ್ಟೆ ಎಂದು ಅರ್ಚಕರ, ಗಣ ಮಕ್ಕಳ ಬಳಿಗೆ ಹೋಗುವ ಮುಗ್ಧತೆ ಅಥವಾ ಮೌಢ್ಯತೆ ಎಷ್ಟೊಂದು ಅಪಾಯಕಾರಿ ಎಂದು ವಿವರಿಸಬೇಕಿಲ್ಲ. ನೈಸರ್ಗಿಕವಾಗಿ ಬರುವ ತೊಂದರೆಗಳಿಗೆ ವೈಜ್ಞಾನಿಕ ಪರಿಹಾರಗಳನ್ನು ಯೋಚಿಸುವುದನ್ನು ಬಿಟ್ಟು, ದೈವ, ಭೂತಗಳಿಗೆ ಬಲಿಕೊಟ್ಟು, ಎಲ್ಲವೂ ಸರಿಹೋಗತ್ತದೆ ಎಂದು ಕುಳಿತುಕೊಳ್ಳುವುದು ಮೂರ್ಖತನವಲ್ಲದೆ ಬೇರೇನೂ ಅಲ್ಲ. ಈ ಪ್ರತಿನಿಧಿಗಳು ದೇವರ, ಭೂತ ಗಣಗಳ ಹೆಸರಿನಲ್ಲಿ ಅಮಾಯಕರನ್ನು ವಂಚಿಸುತ್ತಾ ದಬ್ಬಾಳಿಕೆ ನಡೆಸುತ್ತಾ ಅವರನ್ನು ಭಯ ಗೊಂದಲಗಳ ಕತ್ತಲ ಕೋಣೆಯಲ್ಲಿರಿಸಿ, ಶೋಷಣೆ ಮಾಡುವುದನ್ನು ನೋಡಿಕೊಂಡು ಸುಮ್ಮನಿರುವುದು ಅಕ್ಷಮ್ಯ ನಡೆವಳಿಕೆ.

ಈ ರೀತಿ ಕಣ್ಣಿಗೆ ಕಾಣುವ ಮನುಷ್ಯನ ಮೇಲೆ ದೇವರು, ದೆವ್ವ ಬರುವ ವಿದ್ಯಮಾನವನ್ನು ಪ್ರಸಕ್ತ ವೈಜ್ಞಾನಿಕ ತಿಳಿವಳಿಕೆಯ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಾಗ ಈ ಕೆಳಕಂಡ ತೀರ್ಮಾನಗಳು ನಮ್ಮೆದುರು ನಿಲ್ಲುತ್ತವೆ.

1. ಮೈ ಮೇಲೆ ದೇವರು, ದೆವ್ವ ಬರುವ ಸಂಗತಿ ಒಂದು ಸಾಂಸ್ಕೃತಿಕ ಹಾಗೂ ಸಾಮಾಜಿಕ ವಿಶೇಷ. ಪ್ರಪಂಚದೆಲ್ಲೆಡೆ ಕಂಡು ಬರುತ್ತದೆ.
2. ಎಲ್ಲೆಲ್ಲಿ ಈ ಬಗ್ಗೆ ಆಳವಾದ ನಂಬಿಕೆ, ನಿರೀಕ್ಷೆ ಇದೆಯೋ ಅಲ್ಲಿ ಈ ಸಂಗತಿ ಜರುಗುತ್ತದೆ.
3. ಈ ವಿಶೇಷವನ್ನು ಕೆಲವು ಮಂದಿ ಹಲವು ಉದ್ದೇಶಗಳಿಗಾಗಿ ಬಳಸಿಕೊಳ್ಳುತ್ತಾರೆ. ಇದಕ್ಕೆ ಅವರು ವಾಸಿಸುವ ಸಮಾಜದ ನೇರ ಅಥವಾ ಪರೋಕ್ಷ ಸಮ್ಮತಿ ಇರುತ್ತದೆ.
4. ಕೆಲವು ಬುದ್ಧಿವಂತರು ಇದನ್ನು ಬಳಸಿಕೊಂಡು, ಸಮಾಜದಲ್ಲಿ ಹೆಚ್ಚಿನ ಸ್ಥಾನಮಾನಗಳನ್ನೂ, ಹಣ, ಮರ್ಯಾದೆ, ಮಾನ್ಯತೆಗಳನ್ನೂ ಸಂಪಾದಿಸುತ್ತಾರೆ; ಜೀವನೋಪಾಯಕ್ಕೆ ದಾರಿ

ಮಾಡಿಕೊಳ್ಳುತ್ತಾರೆ. ಇವರ ಮೇಲೆ ಸಾಮಾನ್ಯವಾಗಿ ಬರುವುದು ದೇವರು ಅಥವಾ ದೇವಾಂಶ ಸಂಭೂತರೆಂದು ಹೇಳಿಕೊಂಡವರ ಪ್ರೇತ.

5. ಕೆಲವರು, ಸಾಮಾನ್ಯವಾಗಿ ಮಹಿಳೆಯರು, ತಮ್ಮ ಸಮಸ್ಯೆ, ಅಸಮಾಧಾನ, ಪ್ರತಿಭಟನೆಗಳನ್ನು ವ್ಯಕ್ತಪಡಿಸಲು ಇದನ್ನು ಸಂಪರ್ಕ ಮಾಧ್ಯಮವಾಗಿ ಬಳಸಿಕೊಳ್ಳುತ್ತಾರೆ. ಸ್ತ್ರೀಯರಲ್ಲಿ ದೆವ್ವ ಬರುವುದೂ ಸೇರಿದಂತೆ ಅನೇಕ ಉನ್ಮಾದ,ಮನೋ ಬೇನೆಗಳಿಗೆ ಕಾರಣ, ಜಗತ್ತಿನ ಬಹುತೇಕ ಸಮಾಜಗಳಲ್ಲಿ ಸ್ತ್ರೀಯರು ಗಂಡಸರ ದಬ್ಬಾಳಿಕೆಯಲ್ಲಿ ಅಭಿಪ್ರಾಯ ಸ್ವಾತಂತ್ರ್ಯವನ್ನು ಕಳೆದು ಕೊಂಡಿರುವುದು. ಆದ್ದರಿಂದ ಅವರು ಮನೆಯವರ, ಸಂಬಂಧಪಟ್ಟವರ ಸಹಾಯ ಸಹಾನುಭೂತಿಗಳನ್ನು ದೊರಕಿಸಿಕೊಳ್ಳಲು, ಜವಾಬ್ದಾರಿ ಮತ್ತು ಕಷ್ಟತಮ ಸನ್ನಿವೇಶಗಳಿಂದ ಮಾನವಾಗಿ ಪಾರಾಗಲು ಯತ್ನಿಸುತ್ತಾರೆ. ತಮ್ಮ ಉದ್ದೇಶ ಸಫಲವಾದಾಗ ಅಥವಾ ಸಂಪರ್ಕ ಸಾಧಿಸಲು ಇತರ ಸುಲಭ ಮಾರ್ಗಗಳು ದೊರೆತಾಗ ಈ ವಿದ್ಯಮಾನವನ್ನು ನಿಲ್ಲಿಸುತ್ತಾರೆ.

6. ಇನ್ನು ಕೆಲವರು ಯಾವೊಂದು ಉದ್ದೇಶಿತ ಅಥವಾ ನಿರ್ದಿಷ್ಟ ಲಾಭ, ಗುರಿ ಇಲ್ಲದೆ, ಗುಂಪಿನಲ್ಲಿ ಗೋವಿಂದ ಎಂಬಂತೆ, ಬೇರೆಯವರಲ್ಲಿ ಈ ವಿದ್ಯಮಾನ ಆಗುವುದನ್ನು ಕಂಡು, ಉನ್ಮತ್ತಕಾರಿ ಸಂದರ್ಭಗಳಲ್ಲಿ, ತಾವೂ ಅದೇ ವರ್ತನೆಯನ್ನು ತೋರಿಸುತ್ತಾರೆ.

ದೇವರು ಅಥವಾ ದೆವ್ವ ಮೈಮೇಲೆ ಬಂದಾಗ ಕಲವರು ಅತಿಶಯವಾದ ಮತ್ತು ಅತಿಮಾನುಷವಾದ ಚಮತ್ಕಾರಗಳನ್ನು ಅಪರೂಪಕ್ಕೊಮ್ಮೆ ಪ್ರಕಟಿಸುತ್ತಾರೆ. ಇದು ಹೇಗೆ ಸಾಧ್ಯ ಎಂಬುದರ ಬಗ್ಗೆ ಇನ್ನಷ್ಟು ವೈಜ್ಞಾನಿಕ ಅಧ್ಯಯನಗಳು ನಡೆಯಬೇಕಾಗಿವೆ.

ಈ ವಿಶೇಷ ಪೀಡನೆಯಿಂದ ಮುಕ್ತರಾಗಲು. ಮನೋವೈಜ್ಞಾನಿಕ ಸೂತ್ರಗಳ ಆಧಾರದ ವೈದ್ಯಕೀಯ ಚಿಕಿತ್ಸೆ ಈಗ ಲಭ್ಯವಿದೆ.

ನಿಮ್ಮ ಮನೆಯಲ್ಲಿ ಅಥವಾ ನೆರಹೊರೆಯಲ್ಲಿ ಅಥವಾ ಬಂಧುಗಳಲ್ಲಿ ಯಾರಿಗಾದರೂ ದೇವರು, ದೆವ್ವ ಮೇಲೆ ಬಂದರೆ, ಮಂತ್ರವಾದಿ ಅಥವಾ ಭೂತೋಚ್ಚಾಟನೆ ಮಾಡುತ್ತೇವೆ ಎಂದು ಹೇಳಿ ಕೊಳ್ಳುವ ವ್ಯಕ್ತಿಗಳಲ್ಲಿಗೆ ಅಥವಾ ಸ್ಥಳಗಳಿಗೆ ಹೋಗಿ ಕಾಲ, ಹಣ, ಸಾಮರ್ಥ್ಯಗಳನ್ನು ವ್ಯಯ ಮಾಡದೆ, ಚಿಕಿತ್ಸೆಯ ಹೆಸರಿನಲ್ಲಿ ವ್ಯಕ್ತಿಗೆ ನರಕ ಹಿಂಸೆ ಕೊಡದೆ, ನೇರವಾಗಿ ಸಮೀಪದ ಮನೋವೈದ್ಯರನ್ನು ಕಂಡು, ಸಲಹೆ ಸಹಾಯವನ್ನು ಪಡೆಯಿರಿ. ಯಾವುದೇ ವ್ಯಕ್ತಿ ತನ್ನ ಮೇಲೆ ದೇವರು ಅಥವಾ ದೇವಾಂಶ ಸಂಭೂತ ವ್ಯಕ್ತಿಯ ಪ್ರೇತ ಬರುತ್ತದೆ, ಅದರಿಂದ ತನಗೆ ವಿಶೇಷ ಶಕ್ತಿ ಸಾಮರ್ಥ್ಯಗಳಿವೆ ಎಂದು ಹೇಳಿಕೊಂಡರೆ, ಸುಲಭವಾಗಿ ಅದನ್ನು ನಂಬಿ ಮೋಸ ಹೋಗಬೇಡಿ. ಸತ್ಯಾಸತ್ಯತೆಯನ್ನು ವೈಜ್ಞಾನಿಕ ಒರೆಗಲ್ಲಿಗೆ ತಿಕ್ಕಿ ನೋಡಿ, ಸರಿಯಾದ ನಿರ್ಧಾರಕ್ಕೆ ಬನ್ನಿ. ವೈಜ್ಞಾನಿಕ ದೃಷ್ಟಿಕೋನ ಮತ್ತು ಆಲೋಚನಾ ಶಕ್ತಿಯನ್ನು ಬೆಳೆಸಿಕೊಳ್ಳಿ, ಹಾಗೂ ಈ ದಿಸೆಯಲ್ಲಿ ಇತರರಿಗೆ ಪ್ರೋತ್ಸಾಹ ನೀಡಿ.

ಕಾರ್ಯ ನಿರ್ವಾಹಕ ಸಮಿತಿ :

ಅಧ್ಯಕ್ಷರು : ಡಾ। ಎಚ್. ನರಸಿಂಹಯ್ಯ

ಉಪಾಧ್ಯಕ್ಷರುಗಳು : ಪ್ರೊ। ಎಂ. ಐ. ಸವದತ್ತಿ

ಪ್ರೊ। ಜೆ. ಆರ್. ಲಕ್ಷ್ಮಣರಾವ್

ಕೋಶಾಧಿಕಾರಿ : ಪ್ರೊ। ಎ. ಆರ್. ವಾಸುದೇವಮೂರ್ತಿ

ಕಾರ್ಯದರ್ಶಿ : ಶ್ರೀ ಎಂ. ಎ. ಸೇತುರಾವ್

ರಾಜ್ಯದಲ್ಲಿ ವಿಜ್ಞಾನ ಚಳವಳಿಯನ್ನು ಬೆಳೆಸಲು ಪರಿಷತ್ತಿಗೆ ಸಕ್ರಿಯವಾಗಿ ಸಹಾಯಮಾಡಿರಿ.

ನಿಮ್ಮ ಊರಿನಲ್ಲಿ, ನಿಮ್ಮ ಸಂಸ್ಥೆಯಲ್ಲಿ ಪರಿಷತ್ತಿನ ಘಟಕವನ್ನು ಸ್ಥಾಪಿಸಲು ಮುಂದಾಗಿರಿ.

ಪರಿಷತ್ತು ವಿಜ್ಞಾನ ಪ್ರಚಾರಕ್ಕಾಗಿ ಜನ್ಮ ತಾಳಿದುದು. ಅಷ್ಟೇ ವಿನಾ ಅದು ವಿಜ್ಞಾನಿಗಳದಲ್ಲ, ನಿಮ್ಮದು ಎಂಬುದನ್ನು ನೆನಪಿಡಿರಿ. ನೀವು ವಿಜ್ಞಾನ ಕಲಿತಿರದಿದ್ದರೂ ಪರಿಷತ್ತಿಗೆ ಸದಸ್ಯರಾಗಬಹುದು. ವಿಜ್ಞಾನ ಮುಖೇನ ಜನಸೇವೆ ಮಾಡಲು ಪರಿಷತ್ತು ಒಂದು ಮಾಧ್ಯಮ.

ವಿಜ್ಞಾನ ಪರಿಷತ್ತು ಯಾವುದೇ ರಾಜಕೀಯಕ್ಕೂ ಸಂಬಂಧಪಡದ ಸ್ವಾಯತ್ತ ಸಂಸ್ಥೆ. ಆದ್ದರಿಂದ ನಿಮ್ಮ ವೈಯಕ್ತಿಕ ನಂಬುಗೆಗಳೇನೇ ಇರಲಿ, ವಿಜ್ಞಾನದ ಬಗ್ಗೆ, ವೈಜ್ಞಾನಿಕ ದೃಷ್ಟಿಯ ಬಗ್ಗೆ, ಒಲವಿರುವ ಎಲ್ಲರಿಗೂ ವಿಜ್ಞಾನ ಪರಿಷತ್ತಿನ ಬಾಗಿಲು ತೆರೆದಿದೆ. ಅದಕ್ಕೆ ನಿಮ್ಮ ಬೆಂಬಲ ಅಗತ್ಯ.

ಹೆಚ್ಚಿನ ವಿವರಗಳಿಗಾಗಿ ಕಾರ್ಯದರ್ಶಿಗಳಿಗೆ ಬರೆಯಿರಿ.

* * * *

ಈ ಮಾಲೆಯ ಇತರ ಪ್ರಕಟಣೆಗಳು :

* ಸೌರಶಕ್ತಿ
* ಭಾನಾಮತಿ
* ಪರಿಸರ
* ಕಾಂತಗಳು
* ಹಕ್ಕಿಗಳನ್ನು ಗುರುತಿಸು
* ಅರುವತ್ತು ಪ್ರಶ್ನೆಗಳು (ಬಾಲವಿಜ್ಞಾನದ ಓದುಗರಿಂದ ಬಂದ ಪ್ರಶ್ನೆಗಳು, ಅವುಗಳಿಗೆ ಉತ್ತರಗಳು)

ಬರಲಿವೆ :

ಪರಿಸರ ಮಲಿನತೆ






## ಬಾಲ ವಿಜ್ಞಾನ

ಪ್ರೌಢಶಾಲೆಯ ಮಕ್ಕಳನ್ನೂ
ಅಕ್ಷರಸ್ಥ ವಯಸ್ಕರನ್ನೂ ಗಮನದಲ್ಲಿ
ರಿಸಿಕೊಂಡು ಪ್ರಕಟವಾಗುತ್ತಿರುವ
ಕನ್ನಡದ ಏಕೈಕ ವಿಜ್ಞಾನ ಮಾಸಪತ್ರಿಕೆ
ತಿಳಿವು ಹೆಚ್ಚಿಸುವ ಸರಳ ಲೇಖನಗಳು ; ವಿಜ್ಞಾನ
ಕೌತುಕ, ವಿಜ್ಞಾನ ವಿನೋದ, ನೀನೇ ಮಾಡಿ ನೋಡು.
ವಿಜ್ಞಾನದ ಮುನ್ನಡೆ, ವಿಜ್ಞಾನ ಚಕ್ರಬಂಧ
ಮುಂತಾದ ವಿಶೇಷ ಅಂಕಣಗಳು *
ಬಿಡಿ ಪತ್ರಿಕೆಯ ಬೆಲೆ ಒಂದು ರೂಪಾಯಿ ; ವಾರ್ಷಿಕ
ಚಂದಾ ಹತ್ತು ರೂಪಾಯಿ ; ಶಾಲಾ ಮಕ್ಕಳಿಗೆ
ಎಂಟು ರೂಪಾಯಿ * ವ್ಯವಹರಿಸಲು ವಿಳಾಸ :

**ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು**
ಭಾರತೀಯ ವಿಜ್ಞಾನ ಮಂದಿರದ ಆವರಣ.
ಬೆಂಗಳೂರು-560 012